# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 3231 |
| ಸದಸ್ಯರ ಹೆಸರು | ಶ್ರೀ ರವಿಸುಬ್ರಹ್ಮಣ್ಯ ಎಲ್.ಎ (ಬಸವನಗುಡಿ) |
| ವಿಷಯ | ಸಾಮಾಜಿಕ ಭದ್ರತೆ |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| ಪ್ರಶ್ನೆ | ಉತ್ತರ |
| ಅ) ಬಸವನಗುಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ಸಾಮಾಜಿಕ ಭದ್ರತೆಗಳ ಪಿಂಚಣಿಯನ್ನು ಎಷ್ಟು ಫಲಾನುಭವಿಗಳಿಗೆ ಹಂಚಿಕೆ ಮಾಡಲಾಗುತ್ತಿದೆ; (ವರ್ಷವಾರು ಪಿಂಚಣಿವಾರು ಸಂಪೂರ್ಣ ವಿವರ ನೀಡುವುದು) | ಬಸವನಗುಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಲ್ಲಿ ಪಿಂಚಣಿ ಪಾವತಿಗೆ ಸಂಬಂಧಿಸಿದಂತೆ ವರ್ಷವಾರು ಹಾಗೂ ಯೋಜನಾವಾರು ಫಲಾನುಭವಿಗಳ ಸಂಖ್ಯೆ ಕೆಳಕಂಡಂತಿದೆ. (see table below) |

| ಯೋಜನೆಗಳು | 2018-19 | 2019-20 | 2020-21 |
|---|---|---|---|
| ವೃದ್ಧಾಪ್ಯ ವೇತನ | 3917 | 5538 | 6341 |
| ವಿಧವಾ ವೇತನ | 7540 | 8235 | 8309 |
| ಅಂಗವಿಕಲ ವೇತನ | 2833 | 3075 | 3170 |
| ಸಂಧ್ಯಾ ಸುರಕ್ಷಾ ಯೋಜನೆ | 7040 | 9469 | 10631 |
| ಮನಸ್ವಿನಿ | 147 | 189 | 195 |
| ಮೈತ್ರಿ | 6 | 8 | 11 |
| **ಒಟ್ಟು** | **21,483** | **26,514** | **28,657** |

| ಪ್ರಶ್ನೆ | ಉತ್ತರ |
|---|---|
| ಆ) ಕಳೆದ ಒಂದು ವರ್ಷದಿಂದ ಫಲಾನುಭವಿಗಳಿಗೆ ಪಿಂಚಣಿ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಸಮರ್ಪಕ ವಿಳಾಸ, ಪಿನ್‌ಕೋಡ್, ಬ್ಯಾಂಕ್ ಖಾತೆ ಸಂಖ್ಯೆ, ಐ.ಎಫ್.ಎಸ್.ಸಿ ಕೋಡ್ ಹಾಗೂ ಪ್ರಸ್ತುತ ಕೆಲವು ಬ್ಯಾಂಕ್‌ಗಳ ವಿಲೀನ ಪ್ರಕ್ರಿಯೆ ಜಾರಿಯಲ್ಲಿರುವುದರಿಂದ ಬ್ಯಾಂಕ್ ಖಾತೆ ವಿವರ ಹಾಗೂ ಐ.ಎಫ್.ಎಸ್.ಸಿ ಬದಲಾವಣೆ ಕಾರಣ ಕೆಲವು ಪ್ರಕರಣಗಳಲ್ಲಿ ಪಿಂಚಣಿ ಪಾವತಿ ವ್ಯತ್ಯಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ಅಸಮರ್ಪಕ ಮಾಹಿತಿಯಿಂದ ಪಿಂಚಣಿ ವ್ಯತ್ಯಯವಾಗಿರುವ ಪ್ರಕರಣಗಳಲ್ಲಿ ಮಂಜೂರಾತಿ ಪ್ರಾಧಿಕಾರಿಗಳಾದ ತಹಸೀಲ್ದಾರರು ಫಲಾನುಭವಿಗಳ ಮಾಹಿತಿಯಲ್ಲಿನ ನ್ಯೂನತೆಯನ್ನು ಸರಿಪಡಿಸಲು ತಂತ್ರಾಂಶದಲ್ಲಿ ಅವಕಾಶ ಮಾಡಿಕೊಡಲಾಗಿದ್ದು, ಮಾಹಿತಿ ಸಂಗ್ರಹಿಸಲಾದ ಪ್ರಕರಣಗಳನ್ನು ಅನುಕಲನೆ ಮೂಲಕ ಖಜಾನೆ-2 ತಂತ್ರಾಂಶಕ್ಕೆ ವರ್ಗಾಯಿಸಿ ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ.<br><br>ಮುಂದುವರೆದು, ಬ್ಯಾಂಕ್ ವಿಲೀನದ ಕಾರಣ ಖಾತೆ ಹಾಗೂ ಐ.ಎಫ್.ಎಸ್.ಸಿ ಬದಲಾವಣೆಯಾದ ಪ್ರಕರಣಗಳಲ್ಲಿ ಬ್ಯಾಂಕ್‌ಗಳೊಂದಿಗೆ ಸಮನ್ವಯ ಸಾಧಿಸಿ ಬದಲಾವಣೆಯಾದ ಖಾತೆ ಮಾಹಿತಿಯನ್ನು ಸಂಗ್ರಹಿಸಿ ತಂತ್ರಾಂಶದಲ್ಲಿ ಅಳವಡಿಸಿ ಪಿಂಚಣಿ ಪಾವತಿಗೆ ಕ್ರಮವಹಿಸಲಾಗುತ್ತಿದೆ. |
| ಇ) ಪಿಂಚಣಿ ಆದೇಶ ಹೊಂದಿರುವ ಸಾಮಾಜಿಕ ಭದ್ರತೆಯ ಎಲ್ಲಾ ಪಿಂಚಣಿದಾರರ ಖಾತೆಗಳಿಗೆ ಕೂಡಲೇ ಹಣ ಜಮಾ ಮಾಡಲು ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಂಡಿದೆ? (ಸಂಪೂರ್ಣ ವಿವರ ನೀಡುವುದು) | ಪಿಂಚಣಿ ಪಾವತಿ ವ್ಯವಸ್ಥೆಯನ್ನು ತ್ವರಿತಗತಿಯಲ್ಲಿ ಹಾಗೂ ಪಾರದರ್ಶಕವಾಗಿ ನಿರ್ವಹಿಸುವ ನಿಟ್ಟಿನಲ್ಲಿ ಈ ಹಿಂದಿನ ಖಜಾನೆ-1ರ ವ್ಯವಸ್ಥೆಯನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿ ಖಜಾನೆ-2 ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ಖಜಾನೆ-2 ಸುಧಾರಿತ ವ್ಯವಸ್ಥೆಯಡಿ ಬ್ಯಾಂಕ್/ಅಂಚೆ ಉಳಿತಾಯ ಖಾತೆ ಹೊಂದಿರುವ ಫಲಾನುಭವಿಗಳಿಗೆ *NPCI Gateway* ಮೂಲಕ ಏಕಕಾಲದಲ್ಲಿ ಫಲಾನುಭವಿಗಳ ಖಾತೆಗೆ ತ್ವರಿತವಾಗಿ ನೇರ ಪಿಂಚಣಿ ಸಂದಾಯ ಮಾಡುವ ವ್ಯವಸ್ಥೆ ಹೊಂದಲಾಗಿದೆ. |

| | |
|---|---|
| | ಇದರೊಂದಿಗೆ ಪ್ರಸ್ತುತ ನಾಡಕಛೇರಿಯಲ್ಲಿ ಪಿಂಚಣಿ ಯೋಜನೆಗಳಡಿ ಸೌಲಭ್ಯ ಕೋರಿ ಅರ್ಜಿ ಸಲ್ಲಿಸುವ ವೇಳೆ ಅರ್ಜಿದಾರರು ಬ್ಯಾಂಕ್/ಅಂಚೆ ಕಛೇರಿ ಉಳಿತಾಯ ಖಾತೆ ಮಾಹಿತಿ ಒದಗಿಸುವುದನ್ನು ಕಡ್ಡಾಯಗೊಳಿಸಲಾಗಿದ್ದು, ಈ ಮೂಲಕ ಖಜಾನೆ-2 ವ್ಯವಸ್ಥೆಯಡಿ ಫಲಾನುಭವಿಗಳ ಖಾತೆಗೆ ನೇರವಾಗಿ ಪಿಂಚಣಿ ಪಾವತಿ ಮಾಡಲಾಗುತ್ತಿದೆ.<br><br>ಮುಂದುವರೆದು, ಈ ಹಿಂದಿನ ಖಜಾನೆ-1 ವ್ಯವಸ್ಥೆಯಿಂದ ಖಜಾನೆ-2 ವ್ಯವಸ್ಥೆಗೆ ವರ್ಗಾವಣೆಗೊಂಡು ಇ-ಮನಿಯಾರ್ಡರ್ ಮೂಲಕ ಪಿಂಚಣಿ ಪಾವತಿಯಾಗುತ್ತಿರುವ 19 ಲಕ್ಷ ಫಲಾಭವಿಗಳಿಗೆ ಅಂಚೆ ಇಲಾಖೆ ಸಹಯೋಗದೊಂದಿಗೆ ಉಳಿತಾಯ ಖಾತೆ ತೆರೆಯುವ ಕಾರ್ಯ ಪ್ರಗತಿಯಲ್ಲಿದ್ದು ಇಲ್ಲಿಯವರೆವಿಗೂ 10.96 ಲಕ್ಷ ಫಲಾನುಭವಿಗಳಿಗೆ ಖಾತೆ ತೆರೆಯುವ ಕಾರ್ಯ ಪೂರ್ಣಗೊಂಡಿದ್ದು, ಸದರಿ ಫಲಾನುಭವಿಗಳನ್ನು ನೇರ ಹಣ ಸಂದಾಯ ಯೋಜನೆಯಡಿ ತರುವ ನಿಟ್ಟಿನಲ್ಲಿ ಕ್ರಮವಹಿಸಲಾಗಿದೆ. |

ಡಿಎಸ್‌ಎಸ್‌ಪಿ/ಎಲ್‌ಎಕ್ಯೂ/20/2021

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2682 |
| ಮಾನ್ಯ ಸದಸ್ಯರ ಹೆಸರು | ಶ್ರೀ ವೇದವ್ಯಾಸ್ ಕಾಮತ್ ಡಿ. |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಮಾನ್ಯ ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು). | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಜಿಲ್ಲಾವಾರು ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ವಸತಿ ನಿಲಯಗಳಲ್ಲಿ ಕಳೆದ 20-25 ವರ್ಷಗಳಿಂದ ಹೊರಗುತ್ತಿಗೆ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಡುಗೆ ಮಾಡುವವರು ಮತ್ತು ಅಡುಗೆ ಸಹಾಯಕರನ್ನು ಖಾಯಂಗೊಳಿಸಲು ಬೇಡಿಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ನಿರ್ವಹಿಸಲ್ಪಡುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಅಡುಗೆಯವರು, ಅಡುಗೆ ಸಹಾಯಕರು ಮತ್ತು ರಾತ್ರಿ ಕಾವಲುಗಾರರ ಹುದ್ದೆಗಳನ್ನು ಆಯಾ ವರ್ಷದ ಅವಶ್ಯಕತೆಗನುಗುಣವಾಗಿ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಕೆ.ಟಿ.ಪಿ.ಪಿ. ನಿಯಮಾನುಸಾರ ಪ್ರತಿ ವರ್ಷ ಟೆಂಡರ್ ಆಹ್ವಾನಿಸಿ ಹೊರಸಂಪನ್ಮೂಲ ಏಜೆನ್ಸಿಗಳ ಮೂಲಕ ಸಿಬ್ಬಂದಿಗಳ ಸೇವೆಯನ್ನು ಪಡೆಯಲಾಗುತ್ತಿದೆ. ಸದರಿ ಸೇವೆಯು ಟೆಂಡರ್ ಅವಧಿಗೆ ಮಾತ್ರ ಸೀಮಿತವಾಗಿರುವುದರಿಂದ ಸರ್ಕಾರದ ನಿಯಮಗಳಲ್ಲಿ ಹೊರಸಂಪನ್ಮೂಲ ಸಿಬ್ಬಂದಿಗಳನ್ನು ಖಾಯಂಗೊಳಿಸಲು ಅವಕಾಶವಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ಈ ಸಿಬ್ಬಂದಿಗಳನ್ನು ಖಾಯಂಗೊಳಿಸಲು ಸರ್ಕಾರ ಕ್ರಮಕೈಗೊಳ್ಳಲಾಗಿದೆಯೇ; | ಉದ್ಭವಿಸುವುದಿಲ್ಲ. |
| ಈ) | ಇವರುಗಳನ್ನು ಖಾಯಂಗೊಳಿಸಲು ಸರ್ಕಾರಕ್ಕೆ ಇರುವ ಅಡೆತಡೆಗಳೇನು (ವಿವರ ನೀಡುವುದು). | |

ಸಂಖ್ಯೆ:ಹಿಂವಕ 78 ಬಿಇಟಿ 2021

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ ಹಾಗೂ ಹಿಂದುಳಿದ ವರ್ಗಗಳ
ಕಲ್ಯಾಣ ಇಲಾಖಾ ಸಚಿವರು

# ಅನುಬಂಧ

| ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಜಿಲ್ಲಾವಾರು ವಿವರ | | | | |
|---|---|---|---|---|
| ಕ್ರ. ಸಂ | ಜಿಲ್ಲೆಯ ಹೆಸರು | ಅಡುಗೆಯವರು | ಅಡುಗೆ ಸಹಾಯಕರು | ರಾತ್ರಿ ಕಾವಲುಗಾರರು |
| 1 | ಬಾಗಲಕೋಟೆ | 93 | 26 | 20 |
| 2 | ಬಳ್ಳಾರಿ | 80 | 175 | 20 |
| 3 | ಬೆಳಗಾವಿ | 108 | 55 | 28 |
| 4 | ಬೆಂ (ಗ್ರಾ) | 23 | 31 | 3 |
| 5 | ಬೆಂ (ನ) | 45 | 63 | 15 |
| 6 | ಬೀದರ್ | 64 | 48 | 11 |
| 7 | ಚಾಮರಾಜನಗರ | 17 | 13 | 6 |
| 8 | ಚಿಕ್ಕಬಳ್ಳಾಪುರ | 67 | 32 | 9 |
| 9 | ಚಿಕ್ಕಮಗಳೂರು | 91 | 57 | 37 |
| 10 | ಚಿತ್ರದುರ್ಗ | 49 | 127 | 27 |
| 11 | ದ.ಕನ್ನಡ | 78 | 65 | 33 |
| 12 | ದಾವಣಗೆರೆ | 41 | 104 | 24 |
| 13 | ಧಾರವಾಡ | 69 | 40 | 21 |
| 14 | ಗದಗ್ | 65 | 37 | 17 |
| 15 | ಹಾಸನ್ | 147 | 80 | 27 |
| 16 | ಹಾವೇರಿ | 39 | 22 | 18 |
| 17 | ಕಲ್ಬುರ್ಗಿ | 121 | 69 | 33 |
| 18 | ಕೊಡಗು | 12 | 38 | 8 |
| 19 | ಕೋಲಾರ | 8 | 95 | 13 |
| 20 | ಕೊಪ್ಪಳ | 53 | 78 | 16 |
| 21 | ಮಂಡ್ಯ | 64 | 154 | 27 |
| 22 | ಮೈಸೂರು | 21 | 121 | 23 |
| 23 | ರಾಯಚೂರು | 27 | 87 | 15 |
| 24 | ರಾಮನಗರ | 26 | 41 | 8 |
| 25 | ಶಿವಮೊಗ್ಗ | 144 | 126 | 47 |
| 26 | ತುಮಕೂರು | 125 | 95 | 33 |
| 27 | ಉಡುಪಿ | 27 | 16 | 10 |
| 28 | ಉತ್ತರ ಕನ್ನಡ | 81 | 58 | 29 |
| 29 | ವಿಜಯಪುರ | 27 | 94 | 27 |
| 30 | ಯಾದಗಿರಿ | 11 | 68 | 13 |
| | **ಒಟ್ಟು** | **1823** | **2115** | **618** |

# ಪೂರಕ ಟಿಪ್ಪಣಿ

- ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಒಟ್ಟು 2438 ವಿದ್ಯಾರ್ಥಿ ನಿಲಯಗಳನ್ನು ನಿರ್ವಹಿಸಲಾಗುತ್ತಿದೆ.
- ಸದರಿ ವಿದ್ಯಾರ್ಥಿನಿಲಯಗಳಿಗೆ ಗ್ರೂಪ್ ಡಿ ಹುದ್ದೆಗಳಾದ ಅಡುಗೆಯವರು, ಅಡುಗೆ ಸಹಾಯಕರು ಹಾಗೂ ರಾತ್ರಿ ಕಾವಲುಗಾರರು ಈಗೆ ಒಟ್ಟು 10521 ಹುದ್ದೆಗಳು ಮಂಜೂರಾಗಿರುತ್ತವೆ. ವಿವರಗಳು ಈ ಕೆಳಗಿನಂತಿವೆ.

| ವೃಂದ | ಮಂಜೂರಾದ ಹುದ್ದೆಗಳು | | | ಒಟ್ಟು |
|---|---|---|---|---|
| | ಅಡುಗೆಯವರು | ಅಡುಗೆ ಸಹಾಯಕರು | ರಾತ್ರಿ ಕಾವಲುಗಾರರು | |
| ಗ್ರೂಪ್ ಡಿ | 5716 | 3864 | 941 | 10521 |

- ಒಟ್ಟು ಮಂಜೂರಾದ 10521 ಹುದ್ದೆಗಳ ಪೈಕಿ 5965 ಹುದ್ದೆಗಳು ಭರ್ತಿಯಾಗಿದ್ದು, ಉಳಿಕೆ 4556 ಹುದ್ದೆಗಳನ್ನು 2008 ರಿಂದ ಆಯಾ ವರ್ಷದ ಅವಶ್ಯಕತೆಗನುಗುಣವಾಗಿ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಕೆ.ಟಿ.ಪಿ.ಪಿ. ನಿಯಮಾನುಸಾರ ಪ್ರತಿ ವರ್ಷ ಟೆಂಡರ್ ಆಹ್ವಾನಿಸಿ ಹೊರಸಂಪನ್ಮೂಲ ಏಜೆನ್ಸಿಗಳ ಮೂಲಕ ಸಿಬ್ಬಂದಿಗಳ ಸೇವೆಯನ್ನು ಪಡೆಯಲಾಗುತ್ತಿದೆ.
- ಆಯಾ ಶೈಕ್ಷಣಿಕ ವರ್ಷ ಮುಕ್ತಾಯವಾದ ನಂತರ ಸದರಿ ಸಿಬ್ಬಂದಿಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಲಾಗುತ್ತದೆ. ಮುಂದಿನ ಶೈಕ್ಷಣಿಕ ವರ್ಷ ಆರಂಭವಾದ ನಂತರ ಪುನಃ ಟೆಂಡರ್ ಆಹ್ವಾನಿಸಿ ಹೊರಸಂಪನ್ಮೂಲ ಏಜೆನ್ಸಿಗಳ ಮೂಲಕ ಸಿಬ್ಬಂದಿಗಳ ಸೇವೆಯನ್ನು ಪಡೆಯಲಾಗುತ್ತದೆ.
- ಈ ಪ್ರಕ್ರಿಯೆಯಲ್ಲಿ ಪ್ರತಿ ಶೈಕ್ಷಣಿಕ ವರ್ಷ ಹೊರಸಂಪನ್ಮೂಲ ಏಜೆನ್ಸಿಗಳು ಹಾಗೂ ಹೊರಸಂಪನ್ಮೂಲ ಸಿಬ್ಬಂದಿಗಳು ಬದಲಾವಣೆಗೊಳ್ಳುತ್ತಿರುತ್ತಾರೆ. ಸದರಿ ಸೇವೆಯು ಟೆಂಡರ್ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ.
- ಹೊರಸಂಪನ್ಮೂಲ ಸಿಬ್ಬಂದಿಗಳ ಸೇವೆಯನ್ನು ಖಾಯಂಗೊಳಿಸುವ ಬಗ್ಗೆ ಯಾವುದೇ ಬೇಡಿಕೆಗಳು/ಪ್ರಸ್ತಾವನೆಗಳು ಸ್ವೀಕೃತವಾಗಿರುವುದಿಲ್ಲ.
- ಸರ್ಕಾರದ ನಿಯಮಗಳಲ್ಲಿ ಹೊರಸಂಪನ್ಮೂಲ ಸಿಬ್ಬಂದಿಗಳನ್ನು ಖಾಯಂಗೊಳಿಸಲು ಅವಕಾಶವಿರುವುದಿಲ್ಲ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀಮತಿ ಅನಿತಾ ಕುಮಾರಸ್ವಾಮಿ (ರಾಮನಗರ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **3261** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಲ್ಲಿ ರಾಮನಗರ ಮತ್ತು ಚನ್ನಪಟ್ಟಣ ವಿಧಾನ ಸಭಾ ಕ್ಷೇತ್ರಗಳಿಗೆ ವಸತಿ ಇಲಾಖೆಯಿಂದ ವಿವಿಧ ಯೋಜನೆಗಳಡಿ ಮಂಜೂರಾದ ಮನೆಗಳ ಸಂಖ್ಯೆ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | 2017-18 ನೇ ಸಾಲಿನಿಂದ 2020-21 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಯಡಿ ರಾಮನಗರ ವಿಧಾನ ಸಭಾ ಕ್ಷೇತ್ರಕ್ಕೆ ಒಟ್ಟು 9945 ಮನೆಗಳು ಹಾಗೂ ಚನ್ನಪಟ್ಟಣ ವಿಧಾನಸಭಾ ಕ್ಷೇತ್ರಕ್ಕೆ ಒಟ್ಟು 5,300 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ನೀಡಲಾಗಿರುತ್ತದೆ. ಸದರಿ ಮನೆಗಳ ವಿಧಾನಸಭಾ ಕ್ಷೇತ್ರವಾರು, ಯೋಜನಾವಾರು ಹಾಗೂ ಹಂತವಾರು ವಿವರ ಕೆಳಕಂಡಂತಿದೆ. |
| (ಆ) | ಈ ಪೈಕಿ ಪೂರ್ಣಗೊಂಡಿರುವ ಮತ್ತು ಅಪೂರ್ಣಗೊಂಡಿರುವ ಮನೆಗಳ ಸಂಖ್ಯೆ ಎಷ್ಟು; | |

**ರಾಮನಗರ ವಿಧಾನಸಭಾ ಕ್ಷೇತ್ರ**

| ಯೋಜನೆ | ಮಂಜೂರಾದ ಮನೆಗಳು | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗಬೇಕಾಗಿರುವ ಮನೆಗಳು |
|---|---|---|---|---|
| ಬಸವ ವಸತಿ ಯೋಜನೆ | 4216 | 1647 | 676 | 0 |
| ದೇವರಾಜು ಅರಸು ವಸತಿ ಯೋಜನೆ (ಗ್ರಾಮೀನ) | 41 | 16 | 8 | 17 |
| ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) | 227 | 76 | 51 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 254 | 114 | 39 | 100 |
| ವಾಜಪೇಯಿ ನಗರ ವಸತಿ ಯೋಜನೆ | 329 | 48 | 61 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 4878 | 189 | 928 | 3761 |
| **ಒಟ್ಟು** | **9945** | **2090** | **1763** | **3878** |

| | | |
|---|---|---|
| | | **ಚನ್ನಪಟ್ಟಣ ವಿಧಾನ ಸಭಾ ಕ್ಷೇತ್ರ** |

| ಯೋಜನೆ | ಮಂಜೂರಾದ ಮನೆಗಳು | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗಬೇಕಾಗಿರುವ ಮನೆಗಳು |
|---|---|---|---|---|
| ಬಸವ ವಸತಿ ಯೋಜನೆ | 2059 | 1321 | 420 | 0 |
| ದೇವರಾಜು ಅರಸು ವಸತಿ ಯೋಜನೆ (ಗ್ರಾ) | 99 | 45 | 28 | 26 |
| ಡಾ|| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾ & ನ) | 217 | 100 | 53 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) | 513 | 304 | 68 | 141 |
| ವಾಜಪೇಯಿ ನಗರ ವಸತಿ ಯೋಜನೆ | 124 | 74 | 18 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | 2288 | 13 | 742 | 1533 |
| **ಒಟ್ಟು** | **5300** | **1857** | **1329** | **1700** |

| | | |
|---|---|---|
| (ಇ) | ವಿವಿಧ ಯೋಜನೆಗಳಡಿ ಮಂಜೂರಾಗಿರುವ ಮನೆಗಳ ಕಾಮಗಾರಿಗಳಿಗೆ ಪ್ರಸ್ತುತ ಮಂಜೂರು ಮಾಡಲಾಗಿರುವ ಅನುದಾನದ ಮೊತ್ತವೆಷ್ಟು ; | ಕಳೆದ 3 ವರ್ಷಗಳಿಂದ ರಾಮನಗರ ಮತ್ತು ಚನ್ನಪಟ್ಟಣ ವಿಧಾನ ಸಭಾ ಕ್ಷೇತ್ರಗಳಿಗೆ ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಜಿ.ಪಿ.ಎಸ್ ಭೌತಿಕ ಪ್ರಗತಿಗೆ ಅನುಗುಣವಾಗಿ ಅರ್ಹ ಫಲಾನುಭವಿಗಳ ಆಧಾರ್ ಆಧಾರಿತ್ ಬ್ಯಾಂಕ್ ಖಾತೆಗಳಿಗೆ ಬಿ.ಎಲ್.ಸಿ ಘಟಕದಡಿ ರೂ.46.07 ಕೋಟಿ ಮತ್ತು ಎ.ಎಚ್.ಪಿ. ಘಟಕದಡಿ ರೂ.35.53 ಕೋಟಿ ಹೀಗೆ ಒಟ್ಟಾರೆಯಾಗಿ ರೂ.81.60 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ವಿಧಾನ ಸಭಾ ಕ್ಷೇತ್ರವಾರು / ಯೋಜನಾವಾರು ವಿವರ ಈ ಕೆಳಕಂಡಂತಿದೆ. |

(ರೂ.ಕೋಟಿಗಳಲ್ಲಿ)

| ಯೋಜನೆ | ರಾಮನಗರ | ಚನ್ನಪಟ್ಟಣ | ಒಟ್ಟು |
|---|---|---|---|
| ಬಸವ ವಸತಿ ಯೋಜನೆ | 19.04 | 16.44 | 35.48 |
| ದೇವರಾಜು ಅರಸು ವಸತಿ ಯೋಜನೆ | 0.21 | 0.62 | 0.83 |
| ಡಾ\|\| ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ | 1.42 | 1.98 | 3.40 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ - ಗ್ರಾಮೀಣ | 1.17 | 3.66 | 4.83 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ - ನಗರ | 0.00 | 0.06 | 0.06 |
| ವಾಜಪೇಯಿ ನಗರ ವಸತಿ ಯೋಜನೆ | 0.59 | 0.88 | 1.47 |
| **ಬಿ.ಎಲ್.ಸಿ ಘಟಕ** | **22.43** | **23.64** | **46.07** |
| ಪ್ರಧಾನ ಮಂತ್ರಿ ಆವಾಸ್ ಯೋಜನೆ - ನಗರ | 0.00 | 8.70 | 8.70 |
| ವಾಜಪೇಯಿ ನಗರ ವಸತಿ ಯೋಜನೆ | 11.78 | 2.66 | 14.44 |
| ಡಾ\|\| ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ | 5.94 | 6.45 | 12.39 |
| **ಎ.ಎಚ್.ಪಿ. ಘಟಕ** | **17.72** | **17.81** | **35.53** |
| **ಒಟ್ಟು** | **40.15** | **41.45** | **81.60** |

| | | |
|---|---|---|
| (ಈ) | ಈ ಅನುದಾನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; | ಪ್ರಸ್ತುತ ಸದರಿ ಮೊತ್ತವನ್ನು ಪರಿಷ್ಕರಿಸಲು ಸರ್ಕಾರದ ಮುಂದೆ ಪ್ರಸ್ತಾವನೆಯು ಇರುವುದಿಲ್ಲ. |
| (ಉ) | ಹಾಗಿದ್ದಲ್ಲಿ, ಯಾವಾಗ ಎಷ್ಟು ಪ್ರಮಾಣದ ಅನುದಾನವನ್ನು ಹೆಚ್ಚಿಸಲಾಗುವುದು ? (ವಿವರ ನೀಡುವುದು) | ಉದ್ಭವಿಸುವುದಿಲ್ಲ |

ಸಂಖ್ಯೆ :ವಇ 135 ಹೆಚ್‌ಎಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತ್ತಿನ ಪ್ರಶ್ನೆ ಸಂಖ್ಯೆ | 3169 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸಬೇಕಾದ ದಿನಾಂಕ | 22.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಬಸವಪ್ರಿಯ ಹಡಪದ ಅಪ್ಪಣ್ಣ ಸೇವಾ ಅಭಿವೃದ್ಧಿ ಸಂಘ, ನಿಡಗುಂದ; ಶ್ರೀ ಗಿಡ್ಡೇಶ್ವರ ಮೂಲಸಂಗನಬಸವನ ದೇವಸ್ಥಾನ ಸೇವಾ ಸಮಿತಿ ಮಸೂತಿ; ಶ್ರೀ ಹನುಮಾನ ಜೀರ್ಣೋದ್ಧಾರ ಸೇವಾ ಸಮಿತಿ, ಕೂಡಗಿ ಮತ್ತು ಅಧ್ಯಕ್ಷರು, ಶ್ರೀ ನಿಜಶರಣ ಅಂಬಿಗರ ಚೌಡಯ್ಯ ಸಮಾಜ ಸೇವಾ ಸಂಘ (ರಿ), ಹೆಬ್ಬಾಳ ಇವರುಗಳಿಗೆ ಸಮುದಾಯ ಭವನಗಳನ್ನು ನಿರ್ಮಿಸಲು ಅನುದಾನ ಒದಗಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಗಳನ್ನು ಸಲ್ಲಿಸಲಾಗಿದೆಯೇ; | ವಿಜಯಪುರ ಜಿಲ್ಲೆಗೆ ಸಂಬಂಧಿಸಿದಂತೆ, ನಿಜಶರಣ ಅಂಬಿಗರ ಸಮಾಜ ಸೇವಾ ಸಂಘ (ರಿ) ಹೆಬ್ಬಾಳ ಇವರ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. ಉಳಿದ ಸಂಘ/ಸಂಸ್ಥೆಗಳ ಪ್ರಸ್ತಾವನೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.<br><br>ನಿಜಶರಣ ಅಂಬಿಗರ ಸಮಾಜ ಸೇವಾ ಸಂಘ (ರಿ) ಹೆಬ್ಬಾಳ ಈ ಸಂಸ್ಥೆಗೆ ಅನುದಾನ ಮಂಜೂರು ಮಾಡುವ ಸಂಬಂಧ 2021-22ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ಒದಗಿಸಿರುವ ಅನುದಾನದ ಲಭ್ಯತೆಯ ಮೇರೆಗೆ ಮಂಜೂರು ಮಾಡಲು ಪರಿಶೀಲಿಸಿ ಕ್ರಮಕೈಗೊಳ್ಳಲಾಗುವುದು. |
| ಆ) | ಹಾಗಿದ್ದಲ್ಲಿ, ಪ್ರತಿ ಸಮುದಾಯ ಭವನಕ್ಕೆ ಎಷ್ಟು ಅನುದಾನವನ್ನು ಒದಗಿಸಲಾಗುವುದು; (ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಹಿಂವಕ 695 ಬಿಎಂಎಸ್ 2014 (ಭಾ-2) ರಲ್ಲಿ ಸಮುದಾಯ ಭವನ/ ವಿದ್ಯಾರ್ಥಿನಿಲಯ ಕಟ್ಟಡಗಳಿಗೆ ಅನುದಾನ ಮಂಜೂರು ಮಾಡುವ ಕುರಿತಂತೆ ಮಾರ್ಗಸೂಚಿ ನೀಡಲಾಗಿದ್ದು, ಸದರಿ ಮಾರ್ಗಸೂಚಿಯನ್ವಯ ಈ ಕೆಳಕಂಡಂತೆ ಅನುದಾನ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ.<br><br>ಕ್ರ. ಸಂ \| ಸ್ಥಳ \| ಗರಿಷ್ಠ ಸಹಾಯಧನ<br>1. \| ಗ್ರಾಮ ಪಂಚಾಯಿತಿ/ ಪಟ್ಟಣ ಪಂಚಾಯಿತಿ \| ರೂ.10.00 ಲಕ್ಷ<br>2. \| ತಾಲ್ಲೂಕು ಕೇಂದ್ರ ಸ್ಥಾನ \| ರೂ.25.00 ಲಕ್ಷ<br>3. \| ಜಿಲ್ಲಾ ಕೇಂದ್ರ ಸ್ಥಾನ \| ರೂ.50.00 ಲಕ್ಷ |
| ಇ) | ಅನುದಾನ ಬಿಡುಗಡೆಯ ಪ್ರಸ್ತಾವನೆಗಳು ಸರ್ಕಾರದಲ್ಲಿ ಎಷ್ಟು ವರ್ಷಗಳಿಂದ ಬಾಕಿ ಇರುತ್ತವೆ; | ನಿಜಶರಣ ಶ್ರೀ ಅಂಬಿಗರ ಚೌಡಯ್ಯ ಸಮಾಜ ಸೇವಾ ಸಂಘ (ರಿ), ಹೆಬ್ಬಾಳ ಈ ಸಂಸ್ಥೆಗೆ ಅನುದಾನ ಮಂಜೂರು ಮಾಡುವ ಪ್ರಸ್ತಾವನೆಯು ದಿನಾಂಕ:05.03.2021 ರಂದು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. ಉಳಿದ ಪ್ರಸ್ತಾವನೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. |

| | | |
|---|---|---|
| ಈ) | ಅನುದಾನ ಬಿಡುಗಡೆಯಲ್ಲಿ ವಿಳಂಭವಾಗುತ್ತಿರಲು ಕಾರಣಗಳೇನು; | ನಿಜಶರಣ ಶ್ರೀ ಅಂಬಿಗರ ಚೌಡಯ್ಯ ಸಮಾಜ ಸೇವಾ ಸಂಘ (ರಿ), ಹೆಬ್ಬಾಳ ಈ ಸಂಸ್ಥೆಯ ಪ್ರಸ್ತಾವನೆಯು ದಿನಾಂಕ:05.03.2021 ರಂದು ಸರ್ಕಾರದಲ್ಲಿ ಸ್ವೀಕೃತವಾಗಿರುತ್ತದೆ. ಸದರಿ ಪ್ರಸ್ತಾವನೆಯನ್ನು 2021-22ನೇ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನದ ಲಭ್ಯತೆಯ ಮೇರೆಗೆ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನು ಆಧರಿಸಿ ಅನುದಾನ ಮಂಜೂರು ಮಾಡುವ ಬಗ್ಗೆ ಪರಿಶೀಲಿಸಲಾಗುತ್ತದೆ. |
| ಉ) | ಈ ಭವನಗಳ ನಿರ್ಮಾಣಕ್ಕೆ ಯಾವ ಕಾಲಮಿತಿಯೊಳಗೆ ಅನುದಾನವನ್ನು ಮಂಜೂರು ಮಾಡಲಾಗುವುದು? | ವಿವಿಧ ಸಮುದಾಯಗಳ ಅಭಿವೃದ್ಧಿ ಯೋಜನೆಯಡಿ ಆಯವ್ಯಯದಲ್ಲಿ ಒದಗಿಸಿರುವ ಅನುದಾನದ ಲಭ್ಯತೆಯನುಸಾರ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನಾಧರಿಸಿ ಸದರಿ ಸಂಸ್ಥೆಗೆ ಅನುದಾನ ಮಂಜೂರು ಮಾಡಲು ಪರಿಶೀಲಿಸಲಾಗುವುದು. |

ಸಂಖ್ಯೆ:ಹಿಂವಕ 232 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2032 |
| ಸದಸ್ಯರ ಹೆಸರು | : | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಉಪಮುಖ್ಯಮಂತ್ರಿ<br>ಲೋಕೋಪಯೋಗಿ ಇಲಾಖೆ |

| ಕ್ರ ಸಂ: | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳಿಗೆ ರಸ್ತೆಯ ಮಧ್ಯಭಾಗದಿಂದ ಅಕ್ಕ-ಪಕ್ಕಕ್ಕೆ ಕ್ರಮವಾಗಿ 40, 40 ಮೀಟರ್ ಮತ್ತು 25 ಮೀಟರ್ ರಸ್ತೆ ಪರಿಮಿತಿಯನ್ನು ನಿಗದಿಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ರಸ್ತೆ ಪರಿಮಿತಿಯ ಜಮೀನುಗಳಿಗೆ ಪರಿಹಾರ ಕೊಡದೇ, ಭೂ-ಸ್ವಾಧೀನಪಡಿಸಿಕೊಳ್ಳದೇ, ಸದರಿ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳಲು ಅವಕಾಶ ನೀಡದಿರುವುದರಿಂದ ಸಾರ್ವಜನಿಕರು ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿರುವ ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಮತ್ತು ಮುಖ್ಯ ಜಿಲ್ಲಾ ರಸ್ತೆಗಳ ಅಕ್ಕಪಕ್ಕಗಳಲ್ಲಿ ರಸ್ತೆ ಭೂಮಿಯಲ್ಲಿ ಅನಧಿಕೃತ ಕಟ್ಟಡಗಳು ನಿರ್ಮಾಣವಾಗುತ್ತಿರುವುದು ಮತ್ತು ರಸ್ತೆಗೆ ಸೇರಿದ ಭೂಮಿಯು ಅತಿಕ್ರಮವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದ್ದರಿಂದ ಸರ್ಕಾರದ ಆದೇಶ ಸಂ: ಪಿಡಬ್ಲ್ಯೂಡಿ: 362: ಸಿಆರ್‌ಎಂ 98, ದಿನಾಂಕ: 09.10.1998 ರನ್ವಯ ರಸ್ತೆಯ ಪರಿಮಿತಿಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಲಾಗಿದೆ. ಈ ಆದೇಶದಂತೆ ರಸ್ತೆಯ ಪರಿಮಿತಿಯಲ್ಲಿ ಈಗಾಗಲೇ ಅನಧಿಕೃತ ನಿರ್ಮಾಣವಿದ್ದಲ್ಲಿ ಅಂತಹವುಗಳನ್ನು ತೆರವು ಮಾಡಿಸಬೇಕಿರುತ್ತದೆ. ಅಂತಹ ಪ್ರಕರಣಗಳಿಗೆ ಪರಿಹಾರ ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ.<br><br>ಮುಂದುವರೆದು, ರಸ್ತೆಗಳನ್ನು ಅಗಲೀಕರಣ ಮಾಡಬೇಕಾದ ಸಂದರ್ಭದಲ್ಲಿ ಸಾರ್ವಜನಿಕರ ಆಸ್ತಿಪಾಸ್ತಿಗೆ ಹೆಚ್ಚಿನ ನಷ್ಟ ಉಂಟಾಗಬಾರದೆಂದು ಹಾಗೂ ಸರ್ಕಾರದ ಬೊಕ್ಕಸಕ್ಕೆ ಹೆಚ್ಚಿನ ಹೊರೆಯಾಗಬಾರದೆಂಬ ಉದ್ದೇಶದಿಂದ ನಿಗದಿಪಡಿಸಿದ ರಸ್ತೆಯ ಪರಿಮಿತಿಯಲ್ಲಿ ಅಭಿವೃದ್ಧಿ ಕಾರ್ಯಗಳಿಗೆ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ-1964 ರನ್ವಯ ಅನುಮತಿ ನೀಡಲಾಗುತ್ತಿಲ್ಲ. |
| ಇ) | ಬಂದಿದ್ದಲ್ಲಿ, ಸದರಿ ಜಮೀನುಗಳನ್ನು ಭೂ-ಸ್ವಾಧೀನಪಡಿಸಿಕೊಂಡು ಪರಿಹಾರ ನೀಡುವ ಬಗ್ಗೆ ಸರ್ಕಾರದ ನಿಲುವೇನು? | ರಸ್ತೆ ಅಗಲೀಕರಣ/ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡ ಸಂದರ್ಭದಲ್ಲಿ ಭೂಸ್ವಾಧೀನಪಡಿಸಿ ಕೊಳ್ಳಬೇಕಾದ ಅವಶ್ಯಕತೆ ಕಂಡುಬಂದಲ್ಲಿ, ನಿಯಮಾನುಸಾರ ಭೂಸ್ವಾಧೀನ ಪ್ರಕ್ರಿಯೆ ಕೈಗೊಂಡು ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತದೆ. |

ಕಡತ ಸಂಖ್ಯೆ: ಲೋಇ 102 ಸಿಎನ್‌ಹೆಚ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3390 |
| ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಈಶ್ವರ್ ಖಂಡ್ರೆ (ಭಾಲ್ಕಿ) |
| ಉತ್ತರಿಸುವ ದಿನಾಂಕ | : | 22-03-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಸರ್ಕಾರದಿಂದ ಅಂಬೇಡ್ಕರ್ ಭವನ, ಬಾಬು ಜಗಜೀವನ್ ರಾಮ್ ಭವನ, ಸೇವಾಲಾಲ್ ಭವನ ಮುಂತಾದ ಎಷ್ಟು ಭವನಗಳನ್ನು ನಿರ್ಮಾಣ ಮಾಡಲು ಮಂಜೂರಾತಿ ನೀಡಲಾಗಿದೆ; | 2017-18ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿನ 48 ಸ್ಥಳಗಳಲ್ಲಿ ಡಾ॥ ಬಿ.ಆರ್ ಅಂಬೇಡ್ಕರ್ / ಡಾ ಬಾಬು ಜಗಜೀವನರಾಮ್ ಭವನಗಳನ್ನು ನಿರ್ಮಾಣ ಮಾಡಲು ರೂ.574.00 ಲಕ್ಷಗಳಿಗೆ ಮಂಜೂರಾತಿ ನೀಡಿ, ಮೊದಲ ಕಂತಾಗಿ ರೂ.185.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಈ ಪೈಕಿ ರೂ.32.00 ಲಕ್ಷಗಳ ಅನುದಾನ ವೆಚ್ಚವಾಗಿರುತ್ತದೆ. ವಿವರಗಳನ್ನು ಅನುಬಂಧ-1ರಲ್ಲಿ ನೀಡಿದೆ.<br><br>ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತದಿಂದ 22 ಸೇವಾ ಲಾಲ್ ಸಮುದಾಯ ಭವನಗಳನ್ನು ನಿರ್ಮಾಣ ಮಾಡಲು ಮಂಜೂರಾತಿ ನೀಡಲಾಗಿರುತ್ತದೆ. ವಿವರಗಳನ್ನು ಅನುಬಂಧ-2ರಲ್ಲಿ ನೀಡಿದೆ.<br><br>2020-21ನೇ ಸಾಲಿನಲ್ಲಿ ಬೀದರ್ ಜಿಲ್ಲೆಯಲ್ಲಿ ಹೊಸ ಭವನಗಳನ್ನು ನಿರ್ಮಾಣ ಮಾಡಲು ಸಮಾಜ ಕಲ್ಯಾಣ ಇಲಾಖೆಯಿಂದ ಮಂಜೂರಾತಿ ನೀಡಿರುವುದಿಲ್ಲ. |
| ಆ) | ಈ ಭವನಗಳನ್ನು ನಿರ್ಮಾಣ ಮಾಡಲು ಇಲ್ಲಿಯವರೆಗೆ ಸರ್ಕಾರದಿಂದ ಮಂಜೂರು ಮಾಡಲಾದ ಅನುದಾನವೆಷ್ಟು; ಬಿಡುಗಡೆಯಾಗಿರುವ ಹಾಗೂ ಖರ್ಚು ಮಾಡಲಾದ ಅನುದಾನವೆಷ್ಟು; | |
| ಇ) | ಇದುವರೆಗೆ ಭೌದ್ಧಿಕವಾಗಿ ಎಷ್ಟು ಭವನಗಳ ನಿರ್ಮಾಣ ಕಾರ್ಯದಲ್ಲಿ ಪ್ರಗತಿ ಸಾಧಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಭವನಗಳ ಪ್ರಗತಿ ವಿವರಗಳನ್ನು ಅನುಬಂಧ-1 ಮತ್ತು ಅನುಬಂಧ-2ರಲ್ಲಿ ನೀಡಿದೆ. |
| ಈ) | ಈ ಭವನಗಳಿಗೆ ಸರ್ಕಾರದಿಂದ ಮೊದಲನೇ ಕಂತು ಬಿಡುಗಡೆಯಾಗಿ ಅಂತಿಮ ಕಂತಿನ ಅನುದಾನ ಬಿಡುಗಡೆಯಾಗದ ಕಾರಣ, ಎಲ್ಲಾ ಭವನಗಳ ಕೆಲಸ ಅರ್ಧಕ್ಕೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಭವನಗಳ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಯನ್ನು ಆಧರಿಸಿ ಮಂಜೂರಾತಿ ಮೊತ್ತಕ್ಕೆ ಅನುಗುಣವಾಗಿ ಬಾಕಿ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದ್ದು, ಅನುದಾನದ ಕೊರತೆಯಿಂದಾಗಿ ಭವನಗಳ ನಿರ್ಮಾಣ ಕಾಮಗಾರಿಗಳು ಅರ್ಧಕ್ಕೆ ನಿಂತಿರುವುದಿಲ್ಲ. ಪ್ರಗತಿಯಲ್ಲಿರುವ ಕಾಮಗಾರಿಗಳಿಗೆ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಪ್ರಗತಿ ವರದಿಯನ್ನು ಆಧರಿಸಿ ಕ್ರಮ ವಹಿಸಲಾಗುವುದು. |
| ಉ) | ಬಂದಿದ್ದಲ್ಲಿ, ಬಾಕಿಯಿರುವ ಅನುದಾನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು? | |

ಸಕಇ 125 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

ಶ್ರೀ ಈಶ್ವರ್ ಖಂಡ್ರೆ, ಮಾನ್ಯ ವಿಧಾನಸಭಾ ಸದಸ್ಯರು, ಭಾಲ್ಕಿ ಮತಕ್ಷೇತ್ರ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:-3390ಕ್ಕೆ ಅನುಬಂಧ-1

2017-18ನೇ ಸಾಲಿನಿಂದ 2020-21ನೇ ಸಾಲಿನವರೆಗೂ ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿ ಮಂಜೂರಾದ ಡಾ: ಬಿ.ಆರ್.ಅಂಬೇಡ್ಕರ್ ಭವನ/ ಡಾ: ಬಾಬು ಜಗಜೀವನ ರಾಂ ಭವನ/ ಸಮುದಾಯ ಭವನಗಳ ಘೋಷ್ವಾರೆ

ರೂ ಲಕ್ಷಗಳಲ್ಲಿ

| ಕ್ರ. ಸಂ | ಭವನಗಳ ವಿವರ | ಮಂಜೂರಾದ ಭವನಗಳ ಸಂಖ್ಯೆ | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ | ವೆಚ್ಚ | ಪೂರ್ಣಗೊಂಡ ಭವನಗಳ ಸಂಖ್ಯೆ | ಪ್ರಗತಿಯಲ್ಲಿರುವ ಭವನಗಳ ಸಂಖ್ಯೆ | ಕಾಮಗಾರಿ ಪ್ರಾರಂಭಿಸಲು ಬಾಕಿ ಇರುವ ಭವನಗಳ ಸಂಖ್ಯೆ | ನಿವೇಶನ ಪಡೆಯ ಬೇಕಾಗಿರುವ ಭವನಗಳ ಸಂಖ್ಯೆ | ಗ್ರಾಮಗಳನ್ನು ಆಯ್ಕೆ ಮಾಡಲು ಬಾಕಿ ಇರುವ ಭವನಗಳ ಸಂಖ್ಯೆ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಡಾ|| ಬಿ.ಆರ್ ಅಂಬೇಡ್ಕರ್ ಭವನ | 25 | 305.00 | 114.00 | 32.00 | 0 | 5 | 1 | 17 | 2 |
| 2 | ಡಾ|| ಬಾಬು ಜಗಜೀವನರಾಮ್ ಭವನ | 22 | 264.00 | 66.00 | 0.00 | 0 | 0 | 4 | 17 | 1 |
| 3 | ಮುಳೀಗೆ ಮಾರಯ್ಯ ಸಮುದಾಯ ಭವನ | 1 | 5.00 | 5.00 | 0.00 | 0 | 0 | 1 | 0 | 0 |
| | ಒಟ್ಟು | 48 | 574.00 | 185.00 | 32.00 | 0 | 5 | 6 | 34 | 3 |

ಶ್ರೀ ಈಶ್ವರ್ ಖಂಡ್ರೆ, ಮಾನ್ಯ ವಿಧಾನಸಭಾ ಸದಸ್ಯರು, ಭಾಲ್ಕಿ ಮತಕ್ಷೇತ್ರ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:-3390ಕ್ಕೆ ಅನುಬಂಧ-1

2017-18ನೇ ಸಾಲಿನಿಂದ 2020-21ನೇ ಸಾಲಿನವರೆಗೂ ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿ ಮಂಜೂರಾದ ಡಾ: ಬಿ.ಆರ್.ಅಂಬೇಡ್ಕರ್ ಭವನ/ ಡಾ: ಬಾಬು ಜಗಜೀವನ ರಾಂ ಭವನ/ ಸಮುದಾಯ ಭವನಗಳ ಪ್ರಗತಿ ವಿವರ.

ರೂ ಲಕ್ಷಗಳಲ್ಲಿ

| ಕ್ರ. ಸಂ | ಮಂಜೂರಾದ ವರ್ಷ | ತಾಲ್ಲೂಕು / ವಿಧಾನಸಭಾ ಕ್ಷೇತ್ರ | ಭವನದ ವಿವರ | ಮಂಜೂರಾದ ಸ್ಥಳ | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ | ಬಾಕಿ ಬಿಡುಗಡೆ ಮೊತ್ತ | ವೆಚ್ಚ | ಕಾಮಗಾರಿಯ ಪ್ರಗತಿಯ ಹಂತ |
|---|---|---|---|---|---|---|---|---|---|
| 1 | 2017-18 | ಬೀದರ್ | ಜಗಜೀವನರಾಂ ಭವನ | ಹುಚಕನಹಳ್ಳಿ | 12.00 | 3.00 | 9.00 | 0.00 | ನಿವೇಶನ ಪಡೆಯಬೇಕಾಗಿರುತ್ತದೆ. |
| 2 | 2017-18 | ಬೀದರ್ | ಜಗಜೀವನರಾಂ ಭವನ | ಬಂಬಳಗಿ | 12.00 | 3.00 | 9.00 | 0.00 | ಕಾಮಗಾರಿ ಪ್ರಾರಂಭಿಸಬೇಕಿರುತ್ತದೆ |
| 3 | 2017-18 | ಬೀದರ್ | ಜಗಜೀವನರಾಂ ಭವನ | ನಿಡವಂಚಾ | 12.00 | 3.00 | 9.00 | 0.00 | |
| 4 | 2017-18 | ಬೀದರ್ | ಜಗಜೀವನರಾಂ ಭವನ | ಸಂಗೋಳಗಿ | 12.00 | 3.00 | 9.00 | 0.00 | |
| 5 | 2017-18 | ಬೀದರ್ | ಜಗಜೀವನರಾಂ ಭವನ | ರಂಜೋಳ ಖೇಣಿ | 12.00 | 3.00 | 9.00 | 0.00 | |
| 6 | 2017-18 | ಬೀದರ್ | ಅಂಬೇಡ್ಕರ್ ಭವನ | ಬಂಬಳಗಿ | 12.00 | 3.00 | 9.00 | 0.00 | |
| 7 | 2017-18 | ಬೀದರ್ | ಅಂಬೇಡ್ಕರ್ ಭವನ | ಬೆಳ್ಳೂರ | 10.00 | 5.00 | 5.00 | 5.00 | ಲಿಂಟಲ್ ಹಂತ |
| 8 | 2017-18 | ಬೀದರ್ | ಅಂಬೇಡ್ಕರ್ ಭವನ | ಹಜ್ಜರಗಿ | 10.00 | 5.00 | 5.00 | 5.00 | ಲಿಂಟಲ್ ಹಂತ |
| 9 | 2017-18 | ಬೀದರ್ | ಅಂಬೇಡ್ಕರ್ ಭವನ | ಸಿಂಧೋಳ | 10.00 | 5.00 | 5.00 | 5.00 | ಬೇಸ್‌ಮೆಂಟ್ ಹಂತ |
| 10 | 2017-18 | ಬೀದರ್ | ಅಂಬೇಡ್ಕರ್ ಭವನ | ಬಕ್‌ಚೌಡಿ | 10.00 | 5.00 | 5.00 | 5.00 | ಲಿಂಟಲ್ ಹಂತ |
| 11 | 2017-18 | ಬೀದರ್ | ಅಂಬೇಡ್ಕರ್ ಭವನ | ನಾವದಗೇರಿ | 12.00 | 12.00 | 0.00 | 12.00 | ಛಾವಣಿ ಹಂತ |
| 12 | 2018-19 | ಬೀದರ್ | ಮುಳೀಗೆ ಮಾರಯ್ಯ ಸಮುದಾಯ ಭವನ | ಬಂಗಳಗಿ ಮುಳೀಗೆ | 5.00 | 5.00 | 0.00 | 0.00 | ಕಾಮಗಾರಿ ಪ್ರಾರಂಭಿಸಬೇಕಿರುತ್ತದೆ |
| 13 | 2018-19 | ಭಾಲ್ಕಿ | ಅಂಬೇಡ್ಕರ್ ಭವನ | ವರಹಟ್ಟಿ | 25.00 | 25.00 | 0.00 | 0.00 | ನಿವೇಶನ ಪಡೆಯಬೇಕಾಗಿರುತ್ತದೆ. |
| 14 | 2018-19 | ಬಸವಕಲ್ಯಾಣ | ಅಂಬೇಡ್ಕರ್ ಭವನ | ಹೊಸ ಭವನ | 12.00 | 3.00 | 9.00 | 0.00 | ಮಾನ್ಯ ಶಾಸಕರಿಂದ ಗ್ರಾಮಗಳನ್ನು ಆಯ್ಕೆ ಮಾಡುವುದು ಬಾಕಿ ಇರುತ್ತದೆ |
| 15 | 2018-19 | | ಅಂಬೇಡ್ಕರ್ ಭವನ | ಹೊಸ ಭವನ | 12.00 | 3.00 | 9.00 | 0.00 | |
| 16 | 2018-19 | | ಜಗಜೀವನರಾಂ ಭವನ | ಹೊಸ ಭವನ | 12.00 | 3.00 | 9.00 | 0.00 | |
| 17 | 2018-19 | ಹುಮನಾಬಾದ್ | ಅಂಬೇಡ್ಕರ್ ಭವನ | ಹಣಕುಣಿ | 12.00 | 3.00 | 9.00 | 0.00 | ಮಾನ್ಯ ಸ್ಥಳೀಯ ಶಾಸಕರಿಂದ ಗ್ರಾಮಗಳನ್ನು ಆಯ್ಕೆ ಮಾಡಲಾಗಿದ್ದು, ನಿವೇಶನಗಳನ್ನು ಪಡೆಯಬೇಕಾಗಿರುತ್ತದೆ. |
| 18 | 2018-19 | | ಅಂಬೇಡ್ಕರ್ ಭವನ | ಇಟಗಾ | 12.00 | 3.00 | 9.00 | 0.00 | |
| 19 | 2018-19 | | ಅಂಬೇಡ್ಕರ್ ಭವನ | ಕುಮಾರ ಚಿಂಚೋಳಿ | 12.00 | 3.00 | 9.00 | 0.00 | |
| 20 | 2018-19 | | ಅಂಬೇಡ್ಕರ್ ಭವನ | ಅಲ್ಲೂರಾ | 12.00 | 3.00 | 9.00 | 0.00 | |
| 21 | 2018-19 | | ಅಂಬೇಡ್ಕರ್ ಭವನ | ನಂದಗಾಂವ | 12.00 | 3.00 | 9.00 | 0.00 | |
| 22 | 2018-19 | | ಜಗಜೀವನರಾಂ ಭವನ | ಇಸ್ಲಾಂಪೂರ | 12.00 | 3.00 | 9.00 | 0.00 | |

| ಕ್ರ. ಸಂ | ಮಂಜೂರಾದ ವರ್ಷ | ತಾಲ್ಲೂಕು / ವಿಧಾನಸಭಾ ಕ್ಷೇತ್ರ | ಭವನದ ವಿವರ | ಮಂಜೂರಾದ ಸ್ಥಳ | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ | ಬಾಕಿ ಬಿಡುಗಡೆ ಮೊತ್ತ | ವೆಚ್ಚ | ಕಾಮಗಾರಿಯ ಪ್ರಗತಿಯ ಹಂತ |
|---|---|---|---|---|---|---|---|---|---|
| 23 | 2018-19 | ಹುಮನಾಬಾದ್ | ಜಗಜೀವನರಾಂ ಭವನ | ಬೆನ ಚಿಂಚೋಳಿ | 12.00 | 3.00 | 9.00 | 0.00 | ಮಾನ್ಯ ಸ್ಥಳೀಯ ಶಾಸಕರಿಂದ ಗ್ರಾಮಗಳನ್ನು ಆಯ್ಕೆ ಮಾಡಲಾಗಿದ್ದು, ನಿವೇಶನಗಳನ್ನು ಪಡೆಯಬೇಕಾಗಿರುತ್ತದೆ. |
| 24 | 2018-19 | | ಜಗಜೀವನರಾಂ ಭವನ | ಮುಡಗೂಳ | 12.00 | 3.00 | 9.00 | 0.00 | |
| 25 | 2018-19 | | ಜಗಜೀವನರಾಂ ಭವನ | ಕಲ್ಲೂರ | 12.00 | 3.00 | 9.00 | 0.00 | |
| 26 | 2018-19 | | ಜಗಜೀವನರಾಂ ಭವನ | ತಾಳಮಡಗಿ | 12.00 | 3.00 | 9.00 | 0.00 | |
| 27 | 2018-19 | ಬೀದರ್ ದಕ್ಷಿಣ | ಅಂಬೇಡ್ಕರ್ ಭವನ | ಅಣದೂರ | 12.00 | 3.00 | 9.00 | 0.00 | |
| 28 | 2018-19 | | ಅಂಬೇಡ್ಕರ್ ಭವನ | ಮಂಗಲಗಿ | 12.00 | 3.00 | 9.00 | 0.00 | |
| 29 | 2018-19 | | ಅಂಬೇಡ್ಕರ್ ಭವನ | ಕಮಠಾಣ | 12.00 | 3.00 | 9.00 | 0.00 | |
| 30 | 2018-19 | | ಅಂಬೇಡ್ಕರ್ ಭವನ | ಅಮಲಾಪೂರ | 12.00 | 3.00 | 9.00 | 0.00 | |
| 31 | 2018-19 | | ಜಗಜೀವನರಾಂ ಭವನ | ಗೋರನಳ್ಳಿ | 12.00 | 3.00 | 9.00 | 0.00 | |
| 32 | 2018-19 | | ಜಗಜೀವನರಾಂ ಭವನ | ಮನ್ನಳ್ಳಿ | 12.00 | 3.00 | 9.00 | 0.00 | |
| 33 | 2018-19 | | ಜಗಜೀವನರಾಂ ಭವನ | ಕಾಡವಾದ | 12.00 | 3.00 | 9.00 | 0.00 | |
| 34 | 2018-19 | | ಜಗಜೀವನರಾಂ ಭವನ | ಉಡಬಾಳ | 12.00 | 3.00 | 9.00 | 0.00 | |
| 35 | 2018-19 | ಬೀದರ್ | ಅಂಬೇಡ್ಕರ್ ಭವನ | ಅಲ್ಲಾಪೂರ | 12.00 | 3.00 | 9.00 | 0.00 | |
| 36 | 2018-19 | | ಅಂಬೇಡ್ಕರ್ ಭವನ | ಮರಖಲ್ | 12.00 | 3.00 | 9.00 | 0.00 | |
| 37 | 2018-19 | | ಜಗಜೀವನರಾಂ ಭವನ | ನಮತಾಬಾದ್ | 12.00 | 3.00 | 9.00 | 0.00 | |
| 38 | 2018-19 | | ಜಗಜೀವನರಾಂ ಭವನ | ನವಲಾಸಪೂರ | 12.00 | 3.00 | 9.00 | 0.00 | |
| 39 | 2018-19 | ಭಾಲ್ಕಿ | ಅಂಬೇಡ್ಕರ್ ಭವನ | ತೇಗಂಪೂರ | 12.00 | 3.00 | 9.00 | 0.00 | |
| 40 | 2018-19 | | ಅಂಬೇಡ್ಕರ್ ಭವನ | ಇಂಚೂರು | 12.00 | 3.00 | 9.00 | 0.00 | |
| 41 | 2018-19 | | ಅಂಬೇಡ್ಕರ್ ಭವನ | ಧನ್ನೂರಾ | 12.00 | 3.00 | 9.00 | 0.00 | |
| 42 | 2018-19 | | ಅಂಬೇಡ್ಕರ್ ಭವನ | ಡೊಂಗಾರಗಿ | 12.00 | 3.00 | 9.00 | 0.00 | |
| 43 | 2018-19 | | ಅಂಬೇಡ್ಕರ್ ಭವನ | ಲಖನಗಾಂವ | 12.00 | 3.00 | 9.00 | 0.00 | |
| 44 | 2018-19 | | ಜಗಜೀವನರಾಂ ಭವನ | ಮೆಹಕರ | 12.00 | 3.00 | 9.00 | 0.00 | ಮಾನ್ಯ ಸ್ಥಳೀಯ ಶಾಸಕರಿಂದ |
| 45 | 2018-19 | | ಜಗಜೀವನರಾಂ ಭವನ | ದಾಡಗಿ | 12.00 | 3.00 | 9.00 | 0.00 | |

| ಕ್ರ. ಸಂ | ಮಂಜೂರಾದ ವರ್ಷ | ತಾಲ್ಲೂಕು / ವಿಧಾನಸಭಾ ಕ್ಷೇತ್ರ | ಭವನದ ವಿವರ | ಮಂಜೂರಾದ ಸ್ಥಳ | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ | ಬಾಕಿ ಬಿಡುಗಡೆ ಮೊತ್ತ | ವೆಚ್ಚ | ಕಾಮಗಾರಿಯ ಪ್ರಗತಿಯ ಹಂತ |
|---|---|---|---|---|---|---|---|---|---|
| 46 | 2018-19 | ಭಾಲ್ಕಿ | ಜಗಜೀವನರಾಂ ಭವನ | ಖುದಾವಂದಪೂರ | 12.00 | 3.00 | 9.00 | 0.00 | ಗ್ರಾಮಗಳನ್ನು ಆಯ್ಕೆ ಮಾಡಲಾಗಿದ್ದು, ನಿವೇಶನಗಳನ್ನು ಪಡೆಯಬೇಕಾಗಿರುತ್ತದೆ. |
| 47 | 2018-19 | | ಜಗಜೀವನರಾಂ ಭವನ | ಕೋಟಗೇರಾ | 12.00 | 3.00 | 9.00 | 0.00 | |
| 48 | 2018-19 | | ಜಗಜೀವನರಾಂ ಭವನ | ಲಖನಗಾಂವ | 12.00 | 3.00 | 9.00 | 0.00 | |
| ಒಟ್ಟು | | | | | 574.00 | 185.00 | 389.00 | 32.00 | |

ಶ್ರೀ ಈಶ್ವರ್ ಖಂಡ್ರೆ, ಮಾನ್ಯ ವಿಧಾನಸಭಾ ಸದಸ್ಯರು, ಭಾಲ್ಕಿ ಮತಕ್ಷೇತ್ರ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:-3390ಕ್ಕೆ ಅನುಬಂಧ-2

## 2017-18ನೇ ಸಾಲಿಗೆ ಸೇವಾಲಾಲ್ ಸಮುದಾಯ ಭವನ ಕಾಮಗಾರಿಗಳ ಪ್ರಗತಿ ವರದಿ

| ಕ್ರಸಂ | ಜಿಲ್ಲೆ | ತಾಲ್ಲೂಕು | ತಾಂಡಾಗಳ ಹೆಸರು | ಅಂದಾಜು ಮೊತ್ತ | ಬಿಡುಗಡೆ ಮಾಡಿರುವ ಅನುದಾನ | ಬಾಕಿ ಬಿಡುಗಡೆಯಾಗಬೇಕಾಗಿರುವ ಮೊತ್ತ | ನಿರ್ವಹಣಾ ಸಂಸ್ಥೆ | ಭೌತಿಕ ಪ್ರಗತಿ | ಷರಾ |
|---|---|---|---|---|---|---|---|---|---|
| 1 | ಬೀದರ್ | ಬಸವಕಲ್ಯಾಣ | ಅಂತರಭಾರತಿ ತಾಂಡಾ | 12.00 | 9.00 | 3.00 | ಪಂ.ರಾ.ಇಂ. | ಪ್ರಾರಂಭಿಸಿರುವುದಿಲ್ಲ | ಪ್ರಾರಂಭಿಸಿರುವುದಿಲ್ಲ |
| 2 | ಬೀದರ್ | ಬಸವಕಲ್ಯಾಣ | ದೇವಿ ತಾಂಡಾ | 5.00 | 4.98 | 0.00 | ಪಂ.ರಾ.ಇಂ. | ಪೂರ್ಣಗೊಂಡಿದೆ | ಪೂರ್ಣಗೊಂಡಿದೆ |
| 3 | ಬೀದರ್ | ಬೀದರ್ ದಕ್ಷಿಣ | ಔರಾದ (ಎಸ್) ತಾಂಡಾ | 12.00 | 10.90 | 0.00 | ಪಂ.ರಾ.ಇಂ. | ಪೂರ್ಣಗೊಂಡಿದೆ | ಪೂರ್ಣಗೊಂಡಿದೆ |
| **3** | | | | **29.00** | **24.88** | **3.00** | | | |

## 2018-19ನೇ ಸಾಲಿಗೆ ಸಾಂಸ್ಕೃತಿಕ ಕೇಂದ್ರ/ ಕಾಮಗಾರಿಗಳ ಪ್ರಗತಿ ವರದಿ

| ಕ್ರಸಂ | ಜಿಲ್ಲೆ | ತಾಲ್ಲೂಕು | ತಾಂಡಾಗಳ ಹೆಸರು | ಅಂದಾಜು ಮೊತ್ತ | ಬಿಡುಗಡೆ ಮಾಡಿರುವ ಅನುದಾನ | ಬಾಕಿ ಬಿಡುಗಡೆಯಾಗಬೇಕಾಗಿರುವ ಮೊತ್ತ | ನಿರ್ವಹಣಾ ಸಂಸ್ಥೆ | ಭೌತಿಕ ಪ್ರಗತಿ | ಷರಾ |
|---|---|---|---|---|---|---|---|---|---|
| 1 | ಬೀದರ್ ಜಿಲ್ಲೆ | ಔರಾದ (ಬಿ) | ಭವಾನಿ ನಗರ ತಾಂಡಾ ಸೇವಾಲಾಲ್ ಸಮುದಾಯ ಭವನ | 12.00 | 6.00 | 6.00 | ಪಂ.ರಾ.ಇಂಇ | ಲಿಂಟಲ್ ಕಾಮಗಾರಿ ಪ್ರಗತಿಯಲ್ಲಿದೆ | ಲಿಂಟಲ್ ಕಾಮಗಾರಿ ಪ್ರಗತಿಯಲ್ಲಿದೆ |
| 1 | | | | 12.00 | 6.00 | 6.00 | | | |

## 2019-20ನೇ ಸಾಲಿಗೆ ಸೇವಾಲಾಲ್ ಸಮುದಾಯ ಭವನ ಕಾಮಗಾರಿಗಳ ಪ್ರಗತಿ ವರದಿ

| ಕ್ರಸಂ | ಜಿಲ್ಲೆ | ತಾಲ್ಲೂಕು | ತಾಂಡಾಗಳ ಹೆಸರು | ಅಂದಾಜು ಮೊತ್ತ | ಬಿಡುಗಡೆ ಮಾಡಿರುವ ಅನುದಾನ | ಬಾಕಿ ಬಿಡುಗಡೆಯಾಗ ಬೇಕಾಗಿರುವ ಮೊತ್ತ | ನಿರ್ವಹಣಾ ಸಂಸ್ಥೆ | ಭೌತಿಕ ಪ್ರಗತಿ | ಷರಾ |
|---|---|---|---|---|---|---|---|---|---|
| 1 | ಬೀದರ್ ಜಿಲ್ಲೆ | ಔರಾದ್ | ಭೋಜಾ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |

| | | | | | | | | | |
|---|---|---|---|---|---|---|---|---|---|
| 2 | ಬೀದರ್ ಜಿಲ್ಲೆ | ಔರಾದ್ | ತ್ಯಾವರ ನಾಯ್ಕ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 3 | ಬೀದರ್ ಜಿಲ್ಲೆ | ಔರಾದ್ | ಸೇವಾದಾಸ್ ತಾಂಡಾ (ಏಕಾಂಬ) ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 4 | ಬೀದರ್ ಜಿಲ್ಲೆ | ಔರಾದ್ | ಕಿಶನ್ ನಾಯ್ಕ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 5 | ಬೀದರ್ ಜಿಲ್ಲೆ | ಔರಾದ್ | ಗೋವಿಂದ ತಾಂಡಾ (ದನಗಾಂವ್) ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 6 | ಬೀದರ್ ಜಿಲ್ಲೆ | ಔರಾದ್ | ಟಾಕ್ರು ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| 7 | ಬೀದರ್ ಜಿಲ್ಲೆ | ಔರಾದ್ | ಚಿಂತಾಮಣಿ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| 8 | ಬೀದರ್ ಜಿಲ್ಲೆ | ಔರಾದ್ | ಸೂರಳ್ಳಿ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| 9 | ಬೀದರ್ ಜಿಲ್ಲೆ | ಔರಾದ್ | ಕಾರವಾರ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| 10 | ಬೀದರ್ ಜಿಲ್ಲೆ | ಔರಾದ್ | ಘೋಮ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| 11 | ಬೀದರ್ ಜಿಲ್ಲೆ | ಔರಾದ್ | ಕಿಶನ್ ನಾಯ್ಕ ತಾಂಡಾ (ಗುಡಗಾಂವ್) ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 12 | ಬೀದರ್ ಜಿಲ್ಲೆ | ಔರಾದ್ | ವದನ್‌ಬಾಗ್ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 13 | ಬೀದರ್ ಜಿಲ್ಲೆ | ಔರಾದ್ | ಇಂದ್ರ ನಗರ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 14 | ಬೀದರ್ ಜಿಲ್ಲೆ | ಔರಾದ್ | ರೂಪ್ಲ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 15 | ಬೀದರ್ ಜಿಲ್ಲೆ | ಔರಾದ್ | ಧನಸಿಂಗ್ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |

| | | | | | | | | | |
|---|---|---|---|---|---|---|---|---|---|
| 16 | ಬೀದರ್ ಜಿಲ್ಲೆ | ಔರಾದ್ | ಚಿರ್ಕಿ ತಾಂಡಾ ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 17 | ಬೀದರ್ ಜಿಲ್ಲೆ | ಔರಾದ್ | ಘಮ ತಾಂಡಾ (ಕೋರೆಗಾಂವ್) ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಾರಂಭಿಸಿರುವುದಿಲ್ಲ | ಟೆಂಡರ್ ಹಂತದಲ್ಲಿರುತ್ತದೆ |
| 18 | ಬೀದರ್ ಜಿಲ್ಲೆ | ಔರಾದ್ | ಖೇಮ ತಾಂಡಾ (ದನಗಾಂವ್) ಔರಾದ್ (ಬಿ) | 15.00 | 12.00 | 3.00 | ಪಂ.ರಾ.ಇಂ.ಇ | ಪ್ರಗತಿಯಲ್ಲಿದೆ | ಕಾಮಗಾರಿಯು ಪ್ರಗತಿಯಲ್ಲಿದೆ. |
| **18** | | | | **270.00** | **216.00** | **54.00** | | | |

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2696
ಸದಸ್ಯರ ಹೆಸರು : ಶ್ರೀ ಚಂದ್ರಪ್ಪ. ಎಂ (ಹೊಳಲ್ಕೆರೆ)
ಉತ್ತರಿಸುವ ದಿನಾಂಕ : 22.03.2021
ಉತ್ತರಿಸುವ ಸಚಿವರು : ಕಂದಾಯ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳಲ್ಕೆರೆ ತಾಲ್ಲೂಕಿನಲ್ಲಿ ಗುಂಡೇರಿ ಕಾವಲು (ಅರೆಹಳ್ಳಿ), ವನಕೆ ಮರಡಿ ಕಾವಲು ಹಾಗೂ ತಾಳಿಕಟ್ಟೆ ಕಾವಲುಗಳಲ್ಲಿ ಸುಮಾರು 2358 ಎಕರೆ ಜಮೀನು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೊಳಲ್ಕೆರೆ ತಾಲ್ಲೂಕಿನಲ್ಲಿ ಗುಂಡೇರಿ ಕಾವಲು (ಅರೆಹಳ್ಳಿ), ವನಕೆ ಮರಡಿ ಕಾವಲು ಹಾಗೂ ತಾಳಿಕಟ್ಟೆ ಕಾವಲುಗಳಲ್ಲಿ ಸುಮಾರು 3873 ಎಕರೆ 27ಗುಂಟೆ ಜಮೀನು ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ) | ಈ ಜಮೀನುಗಳು ನೋಂದಾಯಿತ ಸೊಸೈಟಿ ಹೆಸರಿನಲ್ಲಿದ್ದು, ಆ ಸೊಸೈಟಿಯು ಪ್ರಸ್ತುತ ಅಸ್ತಿತ್ವ ಕಳೆದುಕೊಂಡಿರುವುದರಿಂದ ಹಾಗೂ ಆ ಸೊಸೈಟಿಯಿಂದ ಆ ಭಾಗದ ಜನರಿಗೆ ಯಾವುದೇ ರೀತಿಯಿಂದ ಅನುಕೂಲವಾಗದಿರುವುದರಿಂದ ಸದರಿ ಜಮೀನುಗಳನ್ನು ಕೂಡಲೇ ವಾಪಸ್ಸು ಪಡೆದು ರೈತರಿಗೆ ಸಾಗುವಳಿ ಪತ್ರ ನೀಡಲು ಸರ್ಕಾರ ಕ್ರಮ ತೆಗೆದುಕೊಳ್ಳುವುದೇ; | ಅಸ್ತಿತ್ವ ಕಳೆದುಕೊಂಡಿರುವ ಸೊಸೈಟಿಯ ಬಗ್ಗೆ ಜಿಲ್ಲಾಧಿಕಾರಿಯವರಿಂದ ವರದಿ ಪಡೆದು ಸದರಿ ಜಮೀನುಗಳನ್ನು ವಾಪಸ್ಸು ಪಡೆಯುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುವುದು. |
| ಇ) | ಸದರಿ ಜಮೀನುಗಳು ಸಹಕಾರ ಸಂಘದ ಹೆಸರಿನಲ್ಲಿರುವುದರಿಂದ ಈ ಫಲಾನುಭವಿಗಳು ಸರ್ಕಾರಕ್ಕೆ ಫಾರಂ ನಂಬರ್: 53, 57 ರಲ್ಲಿ ಅರ್ಜಿ ಸಲ್ಲಿಸಿದ ಸಂದರ್ಭಗಳಲ್ಲಿ ಅಧಿಕಾರಿಗಳು ಆ ಅರ್ಜಿಗಳನ್ನು ಸ್ವೀಕರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಈ) | ಈ ಭಾಗದ ಸಾವಿರಾರು ಬಡವರು ಇದುವರೆವಿಗೂ ಅರ್ಜಿ ಸಲ್ಲಿಸದೇ ಇರುವುದರಿಂದ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಸಾರ್ವಜನಿಕರಿಗೆ ಫಾರಂ ನಂಬರ್:53-57ರಲ್ಲಿ ಅರ್ಜಿ ಸಲ್ಲಿಸಲು ಮತ್ತೊಮ್ಮೆ ಅವಕಾಶ ಕಲ್ಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಹೊಳಲ್ಕೆರೆ ತಾಲ್ಲೂಕಿನಲ್ಲಿ ಗುಂಡೇರಿ ಕಾವಲು (ಅರೆಹಳ್ಳಿ), ವನಕೆ ಮರಡಿ ಕಾವಲು ಹಾಗೂ ತಾಳಿಕಟ್ಟೆ ಕಾವಲುಗಳಲ್ಲಿನ ಜಮೀನು ಸಂಘ ಸಂಸ್ಥೆಗಳ ಹೆಸರಿನಲ್ಲಿ ಮಂಜೂರಾಗಿರುವುದರಿಂದ ಸಾರ್ವಜನಿಕರಿಗೆ ನಮೂನೆ 53, 57 ರಲ್ಲಿ ಅರ್ಜಿ ಸಲ್ಲಿಸಲು ಅವಕಾಶ ಇರುವುದಿಲ್ಲ. |

ಆರ್‌ಡಿ 22 ಎಲ್‌ಜಿಸಿ 2021

(ಆರ್.ಅಶೋಕ್)
ಕಂದಾಯ ಸಚಿವರು

ಅನುಬಂಧ-1

ಚಿತ್ರದುರ್ಗ ಜಿಲ್ಲೆ, ಹೊಳಲ್ಕೆರೆ ತಾಲ್ಲೂಕಿನ ಗುಂಡೇರಿ ಕಾವಲು, ಅರೇಹಳ್ಳಿ, ವನಕೆ ಮರಡಿ ಹಾಗೂ ತಾಳಿಕಟ್ಟೆ, ಕಾವಲುಗಳಲ್ಲಿನ ಜಮೀನಿನ ವಿವರ ಕೆಳಕಂಡಂತಿರುತ್ತದೆ.

| ಕ್ರ.ಸಂ. | ಗ್ರಾಮ | ರಿ.ಸ.ನಂ. | ವಿಸ್ತೀರ್ಣ ಎ-ಗುಂ. | ಕಾಲಂ ನಂ. 9 ರಲ್ಲಿದ್ದಂತೆ |
|---|---|---|---|---|
| 1) | ಗುಂಡೇರಿ ಕಾವಲ್ | 27 | 51-12 | ಸರ್ಕಾರಿ ಅಮೃತ ಮಹಲ್ ಕಾವಲ್ |
| | | 27 | 600-00 | ಕೆ.ಐ.ಎ.ಡಿ.ಬಿ |
| | | 27 | 400-00 | ಮಹಾತ್ಮ ಗಾಂಧಿ ಕೋ ಆಪರೇಟಿವ್ ಕಲೆಕ್ಟನ್ ಫಾರ್ಮಿಂಗ್ ಸೊಸೈಟಿ ಲಿಮಿಟೆಡ್, ಗುಂಡೇರಿ ಕಾವಲ್ |
| | **ಒಟ್ಟು** | | **1051-12** | |
| 2) | ಅರೇಹಳ್ಳಿ | 1 | 325-00 | ನೆಹರೂ ಸಾಮೂಹಿಕ ವ್ಯವಸಾಯ ಸಹಕಾರ ಸಂಘ |
| | | 1 | 128-36 | ಸರ್ಕಾರಿ ಅಮೃತ ಮಹಲ್ ಕಾವಲ್ |
| | **ಒಟ್ಟು** | | **453-36** | |
| 3) | ವನಕೆ ಮರಡಿ | 1 | 1125-25 | ವನಕೆ ಮರಡಿ ಕಾವಲು ಸಾಮೂಹಿಕ ಸೇವಾ ಸಹಕಾರಿ ಸಂಘ |
| | | 1 | 100-00 | ಸೆಕ್ರೆಟರಿ, ಅನಾಥ ಸೇವಾಶ್ರಮ, ಮಲ್ಲಾಡಿಹಳ್ಳಿ |
| | **ಒಟ್ಟು** | | **1225-25** | |
| 4) | ತಾಳಿಕಟ್ಟೆ ಕಾವಲು | 41 | **807-34** | ಕಾರ್ಯವಲ್ಲಭಾಪುರಿ ಬೇಸಾಯ ಸಹಕಾರಿ ಸಂಘ ಹಂಗಾಮಿ ಸಾಗುವಳಿ. |
| | **ಒಟ್ಟು (1) + (2) + (3) + (4)** | | **3873-27** | - |

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ — 2031

2) ಸದಸ್ಯರ ಹೆಸರು — ಶ್ರೀಮತಿ ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ)

3) ಉತ್ತರಿಸಬೇಕಾದ ದಿನಾಂಕ — 22-03-2021

4) ಉತ್ತರಿಸಬೇಕಾದ ಸಚಿವರು — ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮೀನುಗಾರಿಕಾ ಪ್ರದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮೀನು ಲಭ್ಯವಾದಾಗ ಅಂತಹ ಸ್ಥಳಗಳಲ್ಲಿ ಮೀನುಗಳನ್ನು ಸಂಗ್ರಹಿಸಿಡಲು ಕೋಲ್ಡ್ ಸ್ಟೋರೇಜ್ ವ್ಯವಸ್ಥೆ ಮಾಡಬೇಕೆಂಬ ಬಹುಕಾಲದ ಬೇಡಿಕೆ ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. |
| ಆ) | ಬಂದಿದ್ದಲ್ಲಿ, ಕಾರವಾರ ವಿಧಾನಸಭಾ ಕ್ಷೇತ್ರದಲ್ಲಿ ಮೀನು ದಾಸ್ತಾನು ಮಾಡಲು ಮೀನುಗಾರಿಕೆ ಇಲಾಖೆಯ ವತಿಯಿಂದ ಕೋಲ್ಡ್ ಸ್ಟೋರೇಜ್ ನಿರ್ಮಾಣ ಮಾಡುವ ಯೋಜನೆ ಸರ್ಕಾರದ ಮುಂದಿದೆಯೇ; | ಕಳೆದ ಕೆಲವು ವರ್ಷಗಳಿಂದ ಮೀನು ಹಿಡುವಳಿ ಕಡಿಮೆಯಾಗಿದ್ದು ಹಿಡುವಳಿಯಾದ ಮೀನು ಕೂಡಲೇ ವಿಲೇವಾರಿಯಾಗುತ್ತಿರುವ ಕಾರಣ ಪ್ರಸ್ತುತ ಕಾರವಾರ ವಿಧಾನ ಸಭಾ ಕ್ಷೇತ್ರದಲ್ಲಿ ಮೀನು ದಾಸ್ತಾನು ಮಾಡಲು ಮೀನುಗಾರಿಕೆ ಇಲಾಖೆಯಿಂದ ಕೋಲ್ಡ್ ಸ್ಟೋರೇಜ್ ನಿರ್ಮಾಣ ಮಾಡುವ ಯೋಜನೆ ಇರುವುದಿಲ್ಲ.<br><br>ಪ್ರಧಾನಮಂತ್ರಿ ಮತ್ಸ್ಯಸಂಪದ ಯೋಜನೆಯಲ್ಲಿ ಫಲಾನುಭವಿ ಆಧಾರಿತ ಐಸ್ ಪ್ಲಾಂಟ್ ಹಾಗೂ ಕೋಲ್ಡ್ ಸ್ಟೋರೇಜ್ ನಿರ್ಮಾಣ ಮಾಡಲು ಸಹಾಯಧನ ನೀಡುವ ಯೋಜನೆಯಿರುತ್ತದೆ. ಯೋಜನೆಯ ಉಪಯೋಗ ಪಡೆಯಲು ಜಾಗೃತಿ ಮೂಡಿಸಲಾಗುತ್ತಿದೆ. |
| ಇ) | ಹಾಗಿದ್ದಲ್ಲಿ, ಸದರಿ ಕೋಲ್ಡ್ ಸ್ಟೋರೇಜ್ ಅನ್ನು ಯಾವಾಗ ನಿರ್ಮಾಣ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಅನ್ವಯಿಸುವುದಿಲ್ಲ. |

**ಸಂಖ್ಯೆ: ಪಸಂಮೀ ಇ-103 ಮೀಇಯೋ 2021**

(ಎಸ್ ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

# KARNATAKA LEGISLATIVE ASSEMBLY

1) **Starred LA Question No** : 2031
2) **Name of the Member** : Smt Roopali Santosh Naik (Karawara)
3) **Date of Reply** : 22-03-2021
4) **To be replied by** : Fisheries, Ports and Inland Water Transport Minister

| | Question | Answer |
|---|---|---|
| A | Whether it has come to the notice of the Government the long standing demand for cold storage for fish storage in such areas when large quantities of fish are available in the fishing areas? | Yes. |
| B. | Is there a scheme before the Government to construct cold storage for fish storage in Karwar Assembly Constituency by the Fisheries Department; | Since the fish catch has been low in the last few years and fish is being disposed off immediately, there is no plan to construct cold storages by the Department for fish storage in the Karwar Assembly Constituency.<br><br>The Pradhan Mantri Matsyasampada Yojana has a beneficiary based scheme for construction of cold storage. Awareness is being created in this regard |
| C. | If so, when will the said cold storage be built? (furnish full details) | Not applicable. |

**No. AHF E-103 SFS 2021**

(S. ANGARA)
Minister for Fisheries,
Ports and Inland Water Transport

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2260 |
| ಸದಸ್ಯರ ಹೆಸರು | ಶ್ರೀ ಉಮಾನಾಥ ಎ.ಕೋಟ್ಯಾನ್ |
| ಉತ್ತರಿಸುವ ದಿನಾಂಕ: | 22-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಎಲ್ಲಾ ದೇವಸ್ಥಾನಗಳು ಹಾಗೂ ವಿವಿಧ ಧಾರ್ಮಿಕ ಕೇಂದ್ರಗಳಲ್ಲಿ ಮೂಲಭೂತ ಸೌಲಭ್ಯ/ಸೌರ್ಕಯಗಳನ್ನು ಕಡ್ಡಾಯವಾಗಿ ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ನಿಯಮಗಳು 2002ರ ನಿಯಮ 40 (ಎ) ರನ್ವಯ ಅಧಿಸೂಚಿತ ಸಂಸ್ಥೆಗಳ ಕಟ್ಟಡಗಳ ವ್ಯವಸ್ಥಾಪನೆ, ಸಂರಕ್ಷಣೆ ಮತ್ತು ಅಭಿವೃದ್ಧಿಯನ್ನು ಕೈಗೊಳ್ಳಬೇಕಾಗಿರುತ್ತದೆ.<br><br>ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಬರುವ ಎಲ್ಲಾ ದೇವಸ್ಥಾನಗಳಿಗೆ ಮೂಲಭೂತ ಸೌಲಭ್ಯ/ಸೌಕರ್ಯಗಳಿಗಾಗಿ ಅಗತ್ಯ ಕ್ರಮ ಕೈಗೊಳ್ಳಲು ಧಾರ್ಮಿಕ ದತ್ತಿ ಆಯುಕ್ತರ ಸುತ್ತೋಲೆ ಸಂಖ್ಯೆ ಸಿ.ಎನ್.ಆರ್-1 ಸಿಆರ್/142/2014-15 ದಿನಾಂಕ: 13.01.2015 ರನ್ವಯ ನಿರ್ದೇಶನ ನೀಡಲಾಗಿರುತ್ತದೆ. |
| ಆ | ಮುಜರಾಯಿ ಇಲಾಖೆಗೆ ಒಳಪಟ್ಟ ಹಾಗೂ ಖಾಸಗಿ ವ್ಯವಸ್ಥೆಗಳಲ್ಲಿರುವ ದೇವಸ್ಥಾನಗಳು /ಧಾರ್ಮಿಕ ಕೇಂದ್ರಗಳಿಗೆ ಕುಡಿಯುವ ನೀರು ಶೌಚಾಲಯ ಮತ್ತಿತರ ಅಗತ್ಯ ವ್ಯವಸ್ಥೆಗಳನ್ನು ಒದಗಿಸಿಕೊಡುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳಾವುವು; | ಧಾರ್ಮಿಕ ದತ್ತಿ ಇಲಾಖೆಗೆ ಒಳಪಟ್ಟ ಪ್ರವರ್ಗ 'ಎ' ಮತ್ತು 'ಬಿ' ಶ್ರೇಣಿಯ ದೇವಾಲಯಗಳಿಗೆ ಬರುವ ಭಕ್ತಾಧಿಗಳಿಗೆ ಕುಡಿಯುವ ನೀರಿನ ಸೌಲಭ್ಯ ಮತ್ತು ಶೌಚಾಲಯ ಸೌಲಭ್ಯವನ್ನು ಕಲ್ಪಿಸಲು ಧಾರ್ಮಿಕ ದತ್ತಿ ಆಯುಕ್ತರ ಸುತ್ತೋಲೆ ಸಂಖ್ಯೆ ಸಿ.ಎನ್.ಆರ್-1 ಸಿಆರ್/346/2010-11 ದಿನಾಂಕ: 22.03.2011 ರನ್ವಯ ನಿರ್ದೇಶನ ನೀಡಲಾಗಿರುತ್ತದೆ.<br><br>ಹಾಗೂ ಖಾಸಗಿ ದೇವಸ್ಥಾನಗಳು/ ಧಾರ್ಮಿಕ ಕೇಂದ್ರಗಳಿಗೂ ಸಹ ಕುಡಿಯುವ ನೀರು ಶೌಚಾಲಯ ಮತ್ತಿತರ ಅಗತ್ಯ ವ್ಯವಸ್ಥೆಗಳನ್ನು ಒದಗಿಸಲು ಪ್ರತಿ ಆರ್ಥಿಕ ವರ್ಷದಲ್ಲಿ ಈ ಕೆಳಕಂಡ ಯೋಜನೆಗಳಡಿ ಅನುದಾನ ಮಂಜೂರು ಮಾಡುತ್ತಿದೆ.<br><br>**ಯೋಜನೆ ವಿವರ**<br>ದುರಸ್ಥಿ ಜೀರ್ಣೋದ್ಧಾರ/ಅಭಿವೃದ್ಧಿ<br>ಆರಾಧನಾ ಯೋಜನೆ<br>ಪರಿಶಿಷ್ಟಜಾತಿ ಉಪಯೋಜನೆ<br>ಗಿರಿಜನ ಉಪಯೋಜನೆ<br>ಸಾಮಾನ್ಯ ಸಂಗ್ರಹಣಾ ನಿಧಿಯಿಂದ ಧನ ಸಹಾಯ |
| ಇ | ಆರ್ಥಿಕವಾಗಿ ಹಿಂದುಳಿದ ದೇವಸ್ಥಾನಗಳು, ಧಾರ್ಮಿಕ ಕೇಂದ್ರಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳಲು ಆರ್ಥಿಕ ನೆರವನ್ನು ನೀಡುವ ದಿಶೆಯಲ್ಲಿ ಸರ್ಕಾರದ ಕ್ರಮಗಳೇನು; | ಆರ್ಥಿಕವಾಗಿ ಹಿಂದುಳಿದ ದೇವಸ್ಥಾನಗಳು, ಧಾರ್ಮಿಕ ಕೇಂದ್ರಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳಲು ಆರ್ಥಿಕ ನೆರವನ್ನು ನೀಡುವ ದಿಶೆಯಲ್ಲಿ ಮೇಲ್ಕಂಡ ಯೋಜನೆಗಳ ಅನುದಾನವನ್ನು ಮಂಜೂರು ಮಾಡುತ್ತಿದೆ. |

| | | |
|---|---|---|
| ಈ | ಧಾರ್ಮಿಕ ಕೇಂದ್ರಗಳ ಪ್ರದೇಶಗಳಲ್ಲಿ ಶುಚಿತ್ವಕ್ಕೆ ಒತ್ತುಕೊಡುವ ಕುರಿತು ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಹಾಗೂ ಕ್ರಿಯಾ ಯೋಜನೆಗಳಾವುವು? | ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಟ್ಟ ದೇವಾಲಯಗಳಲ್ಲಿ ಶುಚಿತ್ವಕ್ಕೆ ಒತ್ತು ಕೊಡುವ ಕುರಿತಂತೆ ಧಾರ್ಮಿಕ ದತ್ತಿ ಇಲಾಖೆಯ-ವ್ಯಾಪ್ತಿಗೆ ಬರುವ ರಾಜ್ಯದ ಸಮೂಹ 'ಎ', 'ಬಿ' ಮತ್ತು 'ಸಿ' ಪ್ರವರ್ಗದ ದೇವಾಲಯಗಳಲ್ಲಿ **"ಸ್ವಚ್ಛ ಮಂದಿರ ಅಭಿಯಾನ ಯೋಜನೆ"** ಯನ್ನು 2015-16ನೇ ಸಾಲಿನಿಂದ ಸರ್ಕಾರವು ಜಾರಿಗೆ ತಂದಿರುತ್ತದೆ. **ಸ್ವಚ್ಛ ಮಂದಿರ ಅಭಿಯಾನ ಯೋಜನೆಯನ್ನು** ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಗೆ ಬರುವ ರಾಜ್ಯದ ಸಮೂಹ 'ಎ', 'ಬಿ' ಮತ್ತು 'ಸಿ' ಪ್ರವರ್ಗದ ದೇವಾಲಯಗಳಲ್ಲಿ ಜಾರಿಗೆ ತರಲು ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 83 ಮುಅಬಿ 2015 ದಿ.29.08.2015ನ್ನು ಹೊರಡಿಸಿರುವುದರ ಮೂಲಕ ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |

(ಸಂಖ್ಯೆ:ಕಂಇ 77 ಮುಸಪ್ರ 2021)

**(ಕೋಟಾ ಶ್ರೀನಿವಾಸ ಪೂಜಾರಿ)**
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :: 3224
ಸದಸ್ಯರ ಹೆಸರು :: ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್ (ಗುಬ್ಬಿ)
ಉತ್ತರಿಸುವ ದಿನಾಂಕ :: 22.03.2021
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗುಬ್ಬಿ ವಿಧಾನ ಸಭಾ ಕ್ಷೇತ್ರದ ಬಗರ್ ಹುಕುಂ ಸಮಿತಿಯನ್ನು ಯಾವಾಗ ರಚನೆ ಮಾಡಲಾಗುವುದು; | ಗುಬ್ಬಿ ವಿಧಾನ ಸಭಾ ಕ್ಷೇತ್ರದ ಬಗರ್ ಹುಕುಂ ಸಮಿತಿಯ ರಚನೆಗೆ ಜಿಲ್ಲಾಧಿಕಾರಿಯವರಿಂದ ಪ್ರಸ್ತಾವನೆಯು ಸ್ವೀಕೃತವಾಗಿದ್ದು, ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. ಸಧ್ಯದಲ್ಲಿಯೇ ಗುಬ್ಬಿ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗುವುದು. |
| ಆ) | ಸದರಿ ಸಮಿತಿಯನ್ನು ರಚನೆ ಮಾಡುವ ಉದ್ದೇಶವಿದ್ದಲ್ಲಿ ಆ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; | |
| ಇ) | ಇಲ್ಲವಾದಲ್ಲಿ, ಬಗರ್ ಹುಕುಂ ಸಮಿತಿಯನ್ನು ಇದುವರೆವಿಗೂ ರಚನೆ ಮಾಡದಿರಲು ಕಾರಣವೇನು; (ವಿವರ ನೀಡುವುದು) | |

ಸಂಖ್ಯೆ: ಆರ್‌ಡಿ 17 ಎಲ್‌ಜಿಟಿ 2021

(ಆರ್.ಅಶೋಕ್)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | **3177** |
| ಉತ್ತರಿಸಬೇಕಾದ ದಿನಾಂಕ | : | 22.03.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ವಿಜಯಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ತಾಂಬಾ ಗ್ರಾಮ ಪಂಚಾಯಿತಿ ವ್ಯಾಪ್ತಿಯ ತಾಂಬಾ ಗ್ರಾಮದಲ್ಲಿ ನಿವೇಶನ ರಹಿತ ಕಡು ಬಡವರಿಗೆ ನಿವೇಶನ ಖರೀದಿಸಲು ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸಲ್ಲಿಕೆಯಾಗಿದೆಯೇ ; | ವಿಜಯಪುರ ಜಿಲ್ಲೆ ಇಂಡಿ ತಾಲ್ಲೂಕಿನ ತಾಂಬಾ ಗ್ರಾಮ ಪಂಚಾಯತಿಯ ತಾಂಬಾ ಗ್ರಾಮದ ಸರ್ವೆ ನಂ.223/2 ರಲ್ಲಿ 3 ಎಕರೆ 29 ಗುಂಟೆ ಜಮೀನನ್ನು ಗ್ರಾಮೀಣ ನಿವೇಶನ ಯೋಜನೆಯಡಿ ಖರೀದಿಸಲು ಅನುದಾನ ಕೋರಿ ಜಿಲ್ಲಾಧಿಕಾರಿಗಳು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. |
| (ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ ; | ಸರ್ಕಾರದ ಆದೇಶ ಸಂಖ್ಯೆ:ವಇ 33 ಹೆಚ್‌ಎಹೆಚ್ 2016 (ಭಾ-2),ದಿನಾಂಕ:12.07.2016 ಮತ್ತು 14.07.2017 ರಲ್ಲಿ ಜಮೀನು ಖರೀದಿಯ ದರ ನಿಗದಿಪಡಿಸಿದ್ದು, ಗ್ರಾಮೀಣ ಪ್ರದೇಶದಲ್ಲಿ ಮಾರ್ಗಸೂಚಿ ಬೆಲೆಯ ನಾಲ್ಕು ಪಟ್ಟು ಅಥವಾ ಎಕರೆಗೆ ಗರಿಷ್ಟ ಮಿತಿ ರೂ.9.00 ಲಕ್ಷಗಳು ಇದರಲ್ಲಿ ಯಾವುದು ಕಡಿಮೆಯೋ ಅದನ್ನು ಅನ್ವಯಿಸುವಂತೆ ತಿಳಿಸಲಾಗಿದೆ. ಆದರೆ ಖರೀದಿಗೆ ಪ್ರಸ್ತಾಪಿಸಿರುವ ಜಮೀನಿನ ಮಾರ್ಗಸೂಚಿ ಬೆಲೆ ಪ್ರತಿ ಎಕರೆಗೆ ರೂ.58,000/-ಗಳಿದ್ದು, ಮಾರ್ಗಸೂಚಿ ಬೆಲೆಯ ನಾಲ್ಕು ಪಟ್ಟು ಅಂದರೆ ರೂ.58,000 x 4 = 2,32,000 ಗಳು ಆಗುತ್ತದೆ. ಆದರೆ ಜಿಲ್ಲಾ ಜಮೀನು ಖರೀದಿ ಸಮಿತಿಯು ಪ್ರತಿ ಎಕರೆಗೆ ರೂ.9,00,000/-ಗಳನ್ನು ನಿಗದಿಪಡಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತದೆ.<br><br>ಪ್ರಸ್ತಾಪಿತ 3.29 ಎಕರೆ ಜಮೀನು ಖರೀದಿ ಪ್ರಸ್ತಾವನೆ ದಿನಾಂಕ:30.05.2020 ರಂದು ರಾಜೀವ್ ಗಾಂಧಿ ವಸತಿ ನಿಗಮದಲ್ಲಿ ಸ್ವೀಕೃತವಾಗಿದೆ. ಈ ಪ್ರಸ್ತಾವನೆಗೆ ಪೂರಕವಾದ ಮಾಹಿತಿ/ದಾಖಲೆಗಳು ಲಭ್ಯವಿಲ್ಲದೆ ಇರುವುದರಿಂದ ಸದರಿ |
| (ಇ) | ಸದರಿ ಗ್ರಾಮದ ಬಡವರಿಗೆ ನಿವೇಶನ ಖರೀದಿಸಲು ಅನುದಾನವನ್ನು ಯಾವಾಗ ಮಂಜೂರು ಮಾಡಲಾಗುವುದು ? | |

| | | |
|---|---|---|
| | | ಮಾಹಿತಿ/ದಾಖಲೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿ ಹಾಗೂ ತಾಲ್ಲೂಕು ಪಂಚಾಯಿತಿ ಕಾರ್ಯ ನಿರ್ವಹಣಾಧಿಕಾರಿಗಳಿಂದ ಪಡೆಯಲಾಗಿದ್ದು, ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಿರುವ ದರದ ಪ್ರಕಾರ ಸದರಿ ಪ್ರಸ್ತಾವನೆಯನ್ನು ರಾಜೀವ್ ಗಾಂಧಿ ವಸತಿ ನಿಗಮದ ಹಂತದಲ್ಲಿ ಅನುಮೋದಿಸಲು ಅವಕಾಶವಿಲ್ಲದ ಪ್ರಯುಕ್ತ ದಿನಾಂಕ: 18.03.2021 ರಂದು ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸಿದ್ದು, ಇದನ್ನು ಅನುಮೋದಿಸಿದೆ. |

ಸಂಖ್ಯೆ :ವಇ 134 ಹೆಚ್ಎಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

**1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 3381

**2) ಸದಸ್ಯರ ಹೆಸರು** : ಶ್ರೀ ಖಾದರ್ ಯು.ಟಿ. (ಮಂಗಳೂರು)

**3) ಉತ್ತರಿಸಬೇಕಾದ ದಿನಾಂಕ** : 22-03-2021

**4) ಉತ್ತರಿಸಬೇಕಾದ ಸಚಿವರು** : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕರಾವಳಿಯ ಮೀನುಗಾರರಿಗೆ ಕಳೆದ ನಾಲ್ಕು ತಿಂಗಳಿನಿಂದ ಸರ್ಕಾರವು ಡೀಸೆಲ್ ಸಬ್ಸಿಡಿ ಬಾಕಿ ಇರಿಸಿ ಕೊಂಡಿರುವುದರಿಂದ ಮೀನುಗಾರಿಕಾ ವಲಯದಲ್ಲಿ ಆತಂಕ ಎದುರಾಗಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಡೀಸೆಲ್ ಸಹಾಯಧನ ವನ್ನು (ಸಬ್ಸಿಡಿ) ಯಾವಾಗ ಬಿಡುಗಡೆ ಮಾಡಲಾಗುವುದು? | ಪ್ರಸ್ತುತ, ಮೀನುಗಾರಿಕೆ ದೋಣಿಗಳು ಖರೀದಿಸುವ ಡೀಸೆಲ್ ಮೇಲಿನ ರಾಜ್ಯ ಮಾರಾಟಕರ ತೆರಿಗೆಯ ಮೊತ್ತವನ್ನು ದೋಣಿಗಳ ಮಾಲೀಕರಿಗೆ ನೇರ ನಗದು ವರ್ಗಾವಣೆ (DBT) ಮೂಲಕ ಮರುಪಾವತಿಸ ಲಾಗುತ್ತಿದೆ. 2020-21ನೇ ಸಾಲಿನಲ್ಲಿ ನಿಗದಿಗೊಳಿಸಿದ ಅನುದಾನವನ್ನು ಈಗಾಗಲೇ ಬಿಡುಗಡೆಗೊಳಿಸಲಾಗಿದೆ ಮತ್ತು ಸಂಬಂಧಿಸಿದ ದೋಣಿ ಮಾಲೀಕರಿಗೆ ಡೀಸೆಲ್ ಖರೀದಿಗೆ ಡೀಸೆಲ್ ಮೇಲಿನ ಮಾರಾಟಕರ ತೆರಿಗೆ ಮೊತ್ತವನ್ನು ಮರುಪಾವತಿಸಲಾಗಿದೆ. ಪ್ರಸ್ತುತ, ಹೆಚ್ಚುವರಿ ಅನುದಾನ ರೂ.30.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. |

**ಸಂಖ್ಯೆ: ಪಸಂಮೀ ಇ-104 ಮೀಇಯೋ 2021**

(ಎಸ್. ಅಂಗಾರ)
ಮೀನುಗಾರಿಕೆ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

# KARNATAKA LEGISLATIVE ASSEMBLY

1) **Starred LA Question No** : 3381

2) **Name of the Member** : Sri Khader U.T. (Mangaluru)

3) **Date of Reply** : 22-03-2021

4) **To be replied by** : Fisheries, Ports and Inland Water Transport Minister

| | Question | Answer |
|---|---|---|
| A | Whether the Government is aware of the problem faced by the fisheries sector regarding delay in issue of diesel subsidy to the coastal fishermen pending since four months; | **Yes.** |
| B. | If so, when will the Government release the Diesel subsidy? | Presently, the Government is reimbursing the sales tax portion of the State for the diesel purchased by the fishermen through Direct Beneficiary Transfer (DBT) system. The amount allocated for the year 2020-21 has been already released and inturn the same is transferred to the banks accounts of respective beneficiaries. Currently, Rs.30.00 crores an additional grant has been released. |

**No. AHF E-104 SFS 2021**

19/3/2021

(S. ANGARA)
Minister for Fisheries,
Ports and Inland Water Transport

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3380 |
| ಸದಸ್ಯರ ಹೆಸರು | : | ಶ್ರೀ.ಮಹದೇವ.ಕೆ (ಪಿರಿಯಾಪಟ್ಟಣ) |
| ಉತ್ತರಿಸುವ ದಿನಾಂಕ | : | 22.03.2021 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದಲ್ಲಿದೆಯೇ; | ಪ್ರಸ್ತುತ ರಾಜ್ಯದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಆ) | ಪಿರಿಯಾಪಟ್ಟಣ ಮತಕ್ಷೇತ್ರಕ್ಕೆ ಹೊಸ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಪಿರಿಯಾಪಟ್ಟಣ ಮತಕ್ಷೇತ್ರಕ್ಕೆ ಹೊಸದಾಗಿ ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಇ) | ಹಾಗಿದ್ದಲ್ಲಿ, ಯಾವ ಗ್ರಾಮದಲ್ಲಿ ಪಶು ಚಿಕಿತ್ಸಾಲಯಗಳನ್ನು ಮಂಜೂರು ಮಾಡಲಾಗುವುದು (ವಿವರ ನೀಡುವುದು); | ಉದ್ಭವಿಸುವುದಿಲ್ಲ. |
| ಈ) | ಪಶು ಚಿಕಿತ್ಸಾಲಯಗಳನ್ನು ಮಂಜೂರು ಮಾಡಲು ಸರ್ಕಾರ ನಿಗಧಿಪಡಿಸಿರುವ ಮಾನದಂಡಗಳೇನು (ವಿವರ ನೀಡುವುದು)? | ಪಶು ಚಿಕಿತ್ಸಾಲಯಗಳನ್ನು ಮಂಜೂರು ಮಾಡಲು ಸರ್ಕಾರ ನಿಗಧಿಪಡಿಸಿರುವ ಮಾನದಂಡಗಳನ್ನು <u>ಅನುಬಂಧ</u> ದಲ್ಲಿ ನೀಡಲಾಗಿದೆ. |

**ಸಂ: ಪಸಂಮೀ ಇ-36 ಪಸಸೇ 2021**

**(ಪ್ರಭು.ಬಿ.ಚವ್ಹಾಣ್)**
**ಪಶುಸಂಗೋಪನೆ ಸಚಿವರು**

## ಅನುಬಂಧ

### ಪಶುಚಿಕಿತ್ಸಾಲಯಗಳನ್ನು ಮಂಜೂರು ಮಾಡಲು ಅವಶ್ಯಕತೆ ಇರುವ ಮಾನದಂಡಗಳು

| ಕ್ರ.ಸಂ | ಮಾನದಂಡಗಳು |
|---|---|
| 1 | ಪ್ರತಿ ಪಶುಚಿಕಿತ್ಸಾಲಯ ವ್ಯಾಪ್ತಿಗೆ, 10 ಕಿ.ಮೀ ವ್ಯಾಸದಲ್ಲಿ ಬರುವ ಗ್ರಾಮಗಳಲ್ಲಿ 5000 ಜಾನುವಾರು ಘಟಕಗಳಿರಬೇಕಾಗಿರುತ್ತದೆ. |
| 2 | ಒಂದು ಪಶು ಸಂಸ್ಥೆಯಿಂದ ಇನ್ನೊಂದು ಸಂಸ್ಥೆಗೆ 8 ಕಿ.ಮೀ ದೂರ ಇರಬೇಕಾಗಿರುತ್ತದೆ. |

ಆಯುಕ್ತರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3370 |
| ಸದಸ್ಯರ ಹೆಸರು | : | ಶ್ರೀ ಆಚಾರ್ ಹಾಲಪ್ಪ ಬಸಪ್ಪ |
| ಉತ್ತರಿಸುವ ದಿನಾಂಕ | : | 22.03.2021. |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಕಳೆದ ಮೂರು ವರ್ಷಗಳಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ಎಲ್ಲಾ ಅಭಿವೃದ್ಧಿ ನಿಗಮಗಳಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆಬಾವಿಗಳ ಸಂಖ್ಯೆ ಎಷ್ಟು;</td><td>ಕಳೆದ ಮೂರು ವರ್ಷಗಳಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ವಿವಿಧ ನಿಗಮಗಳಿಂದ ಈ ಕೆಳಕಂಡಂತೆ ಕೊಳವೆ ಬಾವಿಗಳನ್ನು ಕೊರೆಯಿಸಲಾಗಿದೆ.
<table>
<tr><th>ವರ್ಷ</th><th>ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ</th><th>ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ</th><th>ಕರ್ನಾಟಕ ಭೋವಿ ಅಭಿವೃದ್ಧಿ ನಿಗಮ</th></tr>
<tr><td>2017-18</td><td>244</td><td>179</td><td>0</td></tr>
<tr><td>2018-19</td><td>237</td><td>186</td><td>33</td></tr>
<tr><td>2019-20</td><td>0</td><td>0</td><td>0</td></tr>
<tr><td>ಒಟ್ಟು</td><td>481</td><td>365</td><td>33</td></tr>
</table>
</td></tr>
<tr><td>(ಆ)</td><td>ಸದರಿ ಯೋಜನೆಯಡಿ ಕೊರೆದ ಎಲ್ಲಾ ಕೊಳವೆ ಬಾವಿಗಳಿಗೆ ಯಂತ್ರೋಪಕರಣಗಳು ಹಾಗೂ ವಿದ್ಯುತ್ ಸಂಪರ್ಕವನ್ನು ಒದಗಿಸಲಾಗಿದೆಯೇ;</td><td>ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ 2017-18 ಸಾಲಿನಲ್ಲಿ ಕೊರೆದ ಎಲ್ಲಾ 244 ಕೊಳವೆಬಾವಿಗಳಿಗೆ ಪಂಪ್‌ಸೆಟ್ ಮತ್ತು ಪೂರಕ ಸಾಮಗ್ರಿಗಳನ್ನು ಸರಬರಾಜು ಮಾಡಲಾಗಿದೆ. ಹಾಗೂ 96 ಕೊಳವೆಬಾವಿಗಳಿಗೆ ವಿದ್ಯುದ್ದೀಕರಣ ಕಲ್ಪಿಸಲಾಗಿದೆ. 148 ಕೊಳವೆ ಬಾವಿಗಳು ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುತ್ತದೆ. 2018-19ನೇ ಸಾಲಿನಲ್ಲಿ ಕೊರೆದ 237 ಕೊಳವೆಬಾವಿಗಳಿಗೆ ಪಂಪ್ ಸೆಟ್ ಮತ್ತು ಪೂರಕ ಸಾಮಾಗ್ರಿಗಳನ್ನು ಸರಬರಾಜು ಮಾಡಿ ಅಳವಡಿಸಲು ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿ ಇರುತ್ತದೆ.<br><br>ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದಿಂದ 2017-18ನೇ ಸಾಲಿನಲ್ಲಿ ಕೊರೆಯಲಾದ 179 ಕೊಳವೆ ಬಾವಿಗಳಿಗೆ ಪಂಪ್‌ಸೆಟ್ ಸರಬರಾಜು ಮಾಡಿ, ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ. 2018-19 ನೇ ಸಾಲಿನಲ್ಲಿ ಕೊರೆದಿರುವ ಕೊಳವೆ ಬಾವಿಗಳಿಗೆ ಪಂಪ್‌ಸೆಟ್ ಸರಬರಾಜು ಮಾಡಲು ಟೆಂಡರ್ ಆಹ್ವಾನಿಸಲಾಗಿದ್ದು, ಸದರಿ ಟೆಂಡರ್‌ಗೆ ಕೆಲವೊಂದು ಗುತ್ತಿಗೆದಾರರು ಉಚ್ಚ ನ್ಯಾಯಾಲಯದಲ್ಲಿ ತಡೆಯಾಜ್ಞೆ ತಂದಿದ್ದು, ತಡೆಯಾಜ್ಞೆ ತೆರವುಗೊಂಡ ನಂತರ ಪಂಪ್‌ಸಟ್ ಸರಬರಾಜು ಮಾಡಿಸಿ ಯೋಜನೆ ಅನುಷ್ಠಾನಗೊಳಿಸಲಾಗುವುದು.<br><br>ಕರ್ನಾಟಕ ಭೋವಿ ಅಭಿವೃದ್ಧಿ ನಿಗಮದಿಂದ 2018-19ನೇ ಸಾಲಿನಲ್ಲಿ ಕೊರೆಯಿಸಲಾದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿ ಇರುತ್ತದೆ.</td></tr>
</table>

...2

<table>
<tr>
<td>(ಇ)</td>
<td>ಇಲ್ಲವಾದಲ್ಲಿ, ವಿಳಂಬಕ್ಕೆ ಕಾರಣವೇನು;</td>
<td rowspan="2">ಈ ವಿಷಯವನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ. 2018-19ನೇ ಸಾಲಿನಲ್ಲಿ ಕೊರೆದ ಕೊಳವೆಬಾವಿಗಳಗೆ ಪಂಪ್ ಸೆಟ್ ಮತ್ತು ಪೂರಕ ಸಾಮಾಗ್ರಿಗಳನ್ನು ಸರಬರಾಜು ಮಾಡಿ ಅಳವಡಿಸಲು ಆಹ್ವಾನಿಸಿರುವ ಟೆಂಡರ್ ಪ್ರಕ್ರಿಯೆಗೆ ಕೆಲವು ಸರಬರಾಜುದಾರರು ಮಾನ್ಯ ಕರ್ನಾಟಕ ಉಚ್ಛನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 100797/2021(GM-TEN) ರಲ್ಲಿ ದಾವೆಯನ್ನು ಹೂಡಿದ್ದು, ತಡೆಯಾಜ್ಞೆಯನ್ನು ತಂದಿರುತ್ತಾರೆ. ತಡೆಯಾಜ್ಞೆಯನ್ನು ತೆರವುಗೊಳಸಲು ಮಾನ್ಯ ಕರ್ನಾಟಕ ಉಚ್ಛನ್ಯಾಯಾಲಯದಲ್ಲಿ ನಿಗಮದ ಪರವಾಗಿ ವಾದ ಮಂಡಿಸಲು ವಕೀಲರನ್ನು ನೇಮಿಸಲಾಗಿದೆ. ತಡೆಯಾಜ್ಞೆ ತೆರವುಗೊಂಡ ನಂತರ ಕೊರೆದ ಕೊಳವೆಬಾವಿಗಳಗೆ ಪಂಪ್‌ಸೆಟ್ ಮತ್ತು ಪೂರಕ ಸಾಮಗ್ರಿಗಳನ್ನು ಸರಬರಾಜು ಮಾಡಿಸಲು ಕ್ರಮ ಕೈಗೊಳ್ಳಲಾಗುವುದು.<br><br>ಕೊರೆದ 385 ಕೊಳವೆಬಾವಿಗಳನ್ನು ಜೆಸ್ಕಾಂನಲ್ಲಿ ವೈಎಂಡಿ/ಎಂಎಸ್‌ಡಿ ಪಾವತಿಸಿ ಆನ್-ಲೈನ್ ಮೂಲಕ ನೋಂದಣಿ ಮಾಡಿಸಲಾಗಿದೆ. ಪ್ರತಿ ಕೊಳವೆಬಾವಿಗೆ ರೂ 50,000/-ಗಳ ಮುಂಗಡ ಹಣವನ್ನು ಜೆಸ್ಕಾಂಗೆ ಬಿಡುಗಡೆ ಮಾಡಲಾಗಿದೆ. ಜೆಸ್ಕಾಂ ಹಂತದಲ್ಲಿ ವಿದ್ಯುದ್ದೀಕರಣ ಕೆಲಸ ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿದೆ.<br><br>ನ್ಯಾಯಾಲಯದಲ್ಲಿನ ತಡೆಯಾಜ್ಞೆ ತೆರವುಗೊಂಡ ನಂತರ ಪಂಪ್‌ಸೆಟ್ ಸರಬರಾಜು ಮಾಡಿ ಯೋಜನೆ ಅನುಷ್ಟಾನಗೊಳಸಲಾಗುವುದು.</td>
</tr>
<tr>
<td>(ಈ)</td>
<td>ಕೊಳವೆ ಬಾವಿಗಳನ್ನು ಕೊರೆದು ಯಂತ್ರೋಪಕರಣಗಳನ್ನು ವಿಳಂಬವಾಗಿ ನೀಡುವ ಕ್ರಮವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿಲ್ಲವೇ;</td>
</tr>
<tr>
<td>(ಉ)</td>
<td>ಈ ನಿರ್ಲಕ್ಷ್ಯಕ್ಕೆ ಕಾರಣರಾದ ಎಷ್ಟು ಅಧಿಕಾರಿ ಹಾಗೂ ಸಿಬ್ಬಂದಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗಿದೆ? (ವಿವರಗಳನ್ನು ನೀಡುವುದು)</td>
<td>ಉದ್ಭವಿಸುವುದಿಲ್ಲ.</td>
</tr>
</table>

ಸಂಖ್ಯೆ: ಸಕಇ 73 ಆರ್&ಐ 2021

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.